# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜುಲೈ ೧೦, ೨೦೧೪ (ಆಷಾಢ ೧೯, ಶಕ ವರ್ಷ ೧೯೩೬)<br>Bangalore, Thursday, July 10, 2014 (Aashadha 19, Shaka Varsha 1936) | ಸಂಚಿಕೆ ೨೮<br>Issue 28 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಪಾರ್ವತಮ್ಮ, ಮಪಿಎಸ್‌ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/111/2011 (ಓ.ಬಿ.ಸಂ.539/2011) ದಿನಾಂಕ 30.11.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಇವರ ಆದೇಶ ಸಂಖ್ಯೆ: ಅಪೀಲು/43/ಶಿಕ್ಷೆ/2012 (ಓ.ಬಿ. ಸಂಖ್ಯೆ: 99/2012-13) ದಿನಾಂಕ 12.10.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)31/2013-14 ದಿನಾಂಕ 11.03.2014

**ಪ್ರಸ್ತಾವನೆ:**

ಶ್ರೀ ಎಸ್. ಪಾರ್ವತಮ್ಮ, ಮಪಿಎಸ್‌ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹುಳಿಯಾರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

> "ನೀವು ಚಿಕ್ಕನಾಯಕನ ಹಳ್ಳಿ ಗೌ॥ ಸಿ.ಜೆ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯದಿಂದ ಸಿಸಿನಂ.548/10ರಲ್ಲಿ ಸಾಕ್ಷಿ-1ರವರಿಗೆ ದಿನಾಂಕ: 03.06.2011ರಂದು ನ್ಯಾಯಾಲಯಕ್ಕೆ ಹಾಜರುಪಡಿಸಲು ದಸ್ತಗಿರಿ ವಾರೆಂಟ್ ಪ್ರೊಕ್ಲಮೇಷನ್ ಮತ್ತು ಒಂದು ಸಾವಿರ ರೂ.ಗಳ ಅಟಾಚ್‌ಮೆಂಟ್ ಜಪ್ತಿ ವಾರಂಟ್ ಹೊರಡಿಸಿದ್ದರೂ ಸಹ ಅದನ್ನು ಜಾರಿ ಮಾಡದೇ ಕರ್ತವ್ಯ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಹಾಗೂ ನ್ಯಾಯಾಲಯದ ಆದೇಶ ಉಲ್ಲಂಘಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30.11.2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 03 (ಮೂರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 12.10.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆಗಳು ಇರದ ಕಾರಣ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 100 ಪೊಸಿಅ 2013 ಬೆಂಗಳೂರು, ದಿನಾಂಕ: 30.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಪಾರ್ವತಮ್ಮ, ಮಪಿಎಸ್‌ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

**PR.446**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪ್ರಕಾಶ್, ಎಪಿಸಿ–188, ಡಿಎಆರ್, ಕೊಪ್ಪಳ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಆದೇಶ ಸಂಖ್ಯೆ: ಸಿಬ್ಬಂದಿ–4/ಇವಿ/03/2011 (ಆ.ಪು.ಸಂಖ್ಯೆ: 297/2012) ದಿನಾಂಕ 05.04.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/24/ಈವ/2012/ (ಆ.ಪು.ಸಂಖ್ಯೆ: 357/ಈವ/2013) 3304 ದಿನಾಂಕ 24.07.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.08.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)39/2013–14 ದಿನಾಂಕ 11.03.2014

**ಪ್ರಸ್ತಾವನೆ:**

ಶ್ರೀ ಪ್ರಕಾಶ, ಎಪಿಸಿ–188 (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಡಿ.ಎ.ಆರ್. ಘಟಕ, ಕೊಪ್ಪಳ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕರ್ತವ್ಯ ನಿರ್ಲಕ್ಷ್ಯತೆ, ಅತೀವ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

ಶ್ರೀ ಪ್ರಕಾಶ, ಎಪಿಸಿ–188, ಡಿ.ಎ.ಆರ್.ಘಟಕ, ಕೊಪ್ಪಳ ಆದ ನೀವು ದಿನಾಂಕ 01.09.2010ರಿಂದ 07.09.2010ರವರೆಗೆ ಪರಿವರ್ತನೆಯ ರಜೆಯ ಮೇಲೆ ತೆರಳಿ ದಿನಾಂಕ 07.09.2010ರಂದು ರಾತ್ರಿ 08:00 ಗಂಟೆಗೆ ರೋಲ್‌ಕಾಲ್‌ಗೆ ಬಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ನೀವು ಕರ್ತವ್ಯಕ್ಕೆ ಬಾರದೇ ಗೈರು ಹಾಜರಾಗಿದ್ದು ಇರುತ್ತದೆ.

ಶ್ರೀ ರವೀಂದ್ರ ಎಪಿಸಿ–120 ಇವರು ದಿನಾಂಕ 14.09.2010ರಂದು ಸಂಜೆ 06:00 ಗಂಟೆಗೆ ಮಾನ್ಯ ಜಿಲ್ಲಾಧಿಕಾರಿಗಳು, ಕೊಪ್ಪಳರವರ ಅಂಗರಕ್ಷಕ ಕರ್ತವ್ಯವನ್ನು ಮುಗಿಸಿಕೊಂಡು ಮರಳಿ ಮನೆಗೆ ಬಂದು ಅಂಗರಕ್ಷಕ ಕರ್ತವ್ಯಕ್ಕಾಗಿ ನೀಡಲಾದ ಒಂದು 9 ಎಂ.ಎಂ. ಪಿಸ್ತೂಲ್ ಹಾಗೂ 10 ಮದ್ದುಗುಂಡುಗಳನ್ನು ತಮ್ಮ ಮನೆಯಲ್ಲಿಯ ಹಾಲಿನಲ್ಲಿರುವ ಟಿ.ವಿ. ಸ್ಟ್ಯಾಂಡಿನ ಓಪನ್ ಸೆಲ್ಫ್‌ನಲ್ಲಿ ಇಟ್ಟು, ನಂತರ ನಿಮ್ಮನ್ನು ಕರೆದುಕೊಂಡು ಹೊರಗಡೆ ಹೋಗಿ ಹೋಟೆಲ್‌ನಿಂದ ಊಟ ತೆಗೆದುಕೊಂಡು ಬಂದು ಎಪಿಸಿ–120ರವರು ಊಟ ಮಾಡಿದ ಮುಸುರಿಯನ್ನು ಹೊರಗೆ ಚೆಲ್ಲಲು ಹೋದಾಗ ನೀವು ಸೆಲ್ಫ್‌ನಲ್ಲಿ ಇಟ್ಟಿದ್ದ ಸರ್ಕಾರಿ ಆಯುಧ ಒಂದು 9 ಎಂ.ಎಂ. ಪಿಸ್ತೂಲ್ ಮತ್ತು 10 ಮದ್ದುಗುಂಡುಗಳನ್ನು ಕಳುವು ಮಾಡಿಕೊಂಡು ಹೋಗಿದ್ದು ಇರುತ್ತದೆ. ಇದರ ಬಗ್ಗೆ ದಿನಾಂಕ 15.09.2010ರಂದು ಬೆಳಿಗ್ಗೆ ಆಯುಧ ಮತ್ತು ಗುಂಡುಗಳು ಎಪಿಸಿ–120ರವರಿಗೆ ಕಾಣದೇ ಇದ್ದಾಗ ನಿಮ್ಮ ಮನೆಗೆ ಬಂದು ವಿಚಾರ ಮಾಡಿದಾಗ ಪಿಸ್ತೂಲನ್ನು ಮತ್ತು ಮದ್ದುಗುಂಡುಗಳನ್ನು ನೀವು ತೆಗೆದುಕೊಂಡಿರುವುದಿಲ್ಲವೆಂದು ತಿಳಿಸಿದ್ದು, ನಂತರ ಎಪಿಸಿ–120ರವರು ಆಯುಧ ಮತ್ತು ಮದ್ದುಗುಂಡುಗಳು ಕಾಣೆಯಾದ ಬಗ್ಗೆ ಕೊಪ್ಪಳ ನಗರ ಪೊಲೀಸ್ ಠಾಣೆಯಲ್ಲಿ ಫಿರ್ಯಾದಿಯನ್ನು ಸಲ್ಲಿಸಿದ್ದು, ಅದರಂತೆ ಕೊಪ್ಪಳ (ನ) ಠಾಣೆಯಲ್ಲಿ ಗುನ್ನೆ ನಂ. 149/2010 ಕಲಂ 380 ಐ.ಪಿ.ಸಿ. ಅಡಿಯಲ್ಲಿ ಪ್ರಕರಣ ದಾಖಲಾಗಿದ್ದು ಇರುತ್ತದೆ.

ನಂತರ ತನಿಖಾಧಿಕಾರಿಯಾದ ಪಿ.ಐ., ಕೊಪ್ಪಳ (ನ) ಠಾಣೆಯವರು ನಿಮ್ಮನ್ನು ಕೂಲಂಕಷವಾಗಿ ವಿಚಾರಣೆ ಮಾಡಿದಾಗ ಪಿಸ್ತೂಲ್ ಮತ್ತು ಮದ್ದುಗುಂಡುಗಳನ್ನು ನೀವು ಕಳುವು ಮಾಡಿಕೊಂಡು ನಿಮ್ಮ ಅಂಗಿಯೊಳಗೆ ಇಟ್ಟುಕೊಂಡು ಮನೆಗೆ ಹೋಗಿದ್ದು, ನಂತರ ಅದನ್ನು ಮಾರುವ ಕುರಿತು ಬಚ್ಚಿಟ್ಟಿದ್ದು ನಿಜವಿರುತ್ತದೆ ಅಂತಾ ನೀವು ಪಿ.ಐ., ನಗರ ಠಾಣೆಯವರ ಮುಂದೆ ಒಪ್ಪಿಕೊಂಡಿರುತ್ತೀರಿ. ನಂತರ ದಿನಾಂಕ 20.09.2010ರಂದು ನಿಮ್ಮನ್ನು ಪಿ.ಐ., ಕೊಪ್ಪಳ ನಗರ ಠಾಣೆಯವರು ಕಳುವಿನ ಆರೋಪದ ಮೇಲೆ ನಿಮ್ಮನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುತ್ತಾರೆ.

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧ ಆರೋಪವು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರವು ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಅರ್ಜಿದಾರರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 05.04.2012ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ **"ಸೇವೆಯಿಂದ ವಜಾಗೊಳಿಸಿ"** ಇವರ ದಿನಾಂಕ 08.09.2010ರಿಂದ ದಿನಾಂಕ 19.09.2010ರವರೆಗೆ ಕರ್ತವ್ಯಕ್ಕೆ ಗೈರು ಹಾಜರಾದ ಅವಧಿಯನ್ನು **"ವೇತನ ರಹಿತ ರಜೆ"** ಎಂದು ಪರಿಗಣಿಸಿ, ದಿನಾಂಕ 20.09.2010ರಿಂದ ದಿನಾಂಕ 17.03.2011ರವರೆಗಿನ ಅಮಾನತ್ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಆದೇಶದ ವಿರುದ್ಧ ಕಾಲವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24.07.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥ ಕಾರಣಗಳು ಇರದ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 110 ಪೊಸಿಅ 2013 ಬೆಂಗಳೂರು, ದಿನಾಂಕ: 30.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಕಾಶ್, ಎಪಿಸಿ–188, ಡಿಎಆರ್, ಕೊಪ್ಪಳ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

**PR.447**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ವೈ. ಕಾಳೆ, ಸಿಪಿಸಿ–2700, ಇವರು ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/ನಿಯಮ–6/10/2010 (ಆದೇಶ ಪುಸ್ತಕ ಸಂಖ್ಯೆ: 764/2012) ದಿನಾಂಕ 08.08.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(4)/2/2013–14 ದಿನಾಂಕ 26.04.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.09.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)47/2013–14 ದಿನಾಂಕ 21.11.2013 ಮತ್ತು 09.01.2014

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 264 ಸಿಎನ್‌ಎಸ್ 2013 ದಿನಾಂಕ: 21.04.2014

**ಪ್ರಸ್ತಾವನೆ:**

ಶ್ರೀ ಎಸ್.ವೈ. ಕಾಳೆ, ಸಿಪಿಸಿ–2700, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಪರಸ್ತ್ರೀಯೊಂದಿಗೆ ಸಂಪರ್ಕ ಬೆಳೆಸುವುದು ಹಾಗೂ ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಕಾರು ಖರೀದಿಸಿದ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

"ನೀವು ಶ್ರೀ ಎಸ್.ವೈ. ಕಾಳೆ, ಸಿಪಿಸಿ–2700, ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ರವರು ಶ್ರೀ ರತ್ನಾಕರ ಮರಿಯಪ್ಪ ಹೋಳಗಿ ಸಾ: ಧಾರವಾಡ ಜೆ.ಎಸ್.ಎಸ್.ದ ಸಹಾಯಕನಾಗಿ ಕರ್ತವ್ಯ ನಿರ್ವಹಿಸುತ್ತಿರುವವರ ಪತ್ನಿಯಾದ ಶ್ರೀಮತಿ ರಂಜಿತಾ ರವರ ಜೊತೆ ಶ್ರೀ ಎಸ್.ವೈ.ಕಾಳೆ, ಸಿಪಿಸಿ–2700 ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ರವರು ಅವರ ಗಂಡ ಇಲ್ಲದ ವೇಳೆಯಲ್ಲಿ ಅವರ ಮನೆಯ ಹತ್ತಿರ ಮೇಲಿಂದ ಮೇಲೆ ಬಂದು ಹೋಗುತ್ತಿದ್ದುದಲ್ಲದೇ, ಸದರಿ ರಂಜಿತಾರವರು ವಿವಾಹಿತ ಮಹಿಳೆಯಾಗಿದ್ದರೂ ಕೂಡ, ಅವರ ಜೊತೆ ಫೋನ್ ಮಾಡಿ ಮಾತನಾಡುವುದಲ್ಲದೇ, ಅವಳಿಗೆ ಆಮಿಷ, ಆಕಾಂಕ್ಷೆಗಳನ್ನು ಒಡ್ಡಿ ಮನಸ್ಸನ್ನು ಒಲಿಸಿಕೊಂಡು ಅವಳನ್ನು ಕಾರ್ ನಂ. ಕೆಎ02 ಎಂ1049 ನೇದ್ದರಲ್ಲಿ ಕರೆದುಕೊಂಡು ಹೋಗುತ್ತಿರುವುದಲ್ಲದೇ, ವಿವಾಹಿತ ಪರಸ್ತ್ರೀಯೊಂದಿಗೆ ಉದ್ದೇಶಪೂರ್ವಕವಾಗಿ ಸಂಪರ್ಕವನ್ನು ಬೆಳೆಸಿಕೊಂಡು ಇಲಾಖೆಯ ಘನತೆಗೆ ಕಳಂಕ ಬರುವ ರೀತಿಯಲ್ಲಿ ವರ್ತಿಸಿ, ದುರ್ನಡತೆ ಪ್ರದರ್ಶಿಸಿದ ಆಪಾದನೆ.

ಎರಡನೆಯದಾಗಿ ಶ್ರೀ ಎಸ್.ವೈ.ಕಾಳೆ, ಸಿಪಿಸಿ–2700, ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ರವರು ಕಾರ್ ನಂ. ಕೆಎ02 ಎಂ1049 ನೇದ್ದು ಇಲಾಖೆಯ ಸಕ್ಷಮ (ಕಾಂಪಿಟೆಂಟ್) ಅಧಿಕಾರಿಯವರ ಅನುಮತಿ ಇಲ್ಲದೆ ಶ್ರೀ ಮಹ್ಮದ್ ಇಸಾಕ್ ತಂದೆ ಅಬ್ದುಲಸಾಬ ಮಕಾನದಾರ ಇವರಿಂದ ರೂ.42,000–00ಗೆ ಖರೀದಿಸಿದ ವಾಹನವನ್ನು ತನ್ನ ಹೆಸರಿಗೆ ವರ್ಗಾಯಿಸದೇ ಮೇಲೆ ನಮೂದಿಸಿದ ಅನೈತಿಕ ಕೆಲಸಗಳಿಗಾಗಿ ಉಪಯೋಗಿಸುತ್ತಿದ್ದು, ಒಬ್ಬ ಕಾನೂನು ಜಾರಿಗೊಳಿಸುವ ಜವಾಬ್ದಾರಿ ಹೊತ್ತ ಪೊಲೀಸ್ ಅಧಿಕಾರಿಯಾಗಿ ಸಾರ್ವಜನಿಕರಿಗೆ ರಕ್ಷಣೆ ನೀಡುವ ಕರ್ತವ್ಯ ಮಾಡುವ ಬದಲಾಗಿ ಸಾರ್ವಜನಿಕರು ಇಲಾಖೆಗೆ ಅಗೌರವ ಹಾಗೂ ಅವಿಶ್ವಾಸದಿಂದ ನೋಡುವ ರೀತಿಯಲ್ಲಿ ವರ್ತಿಸಿದ ಆಪಾದನೆ".

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಭಾಗಶಃ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 08.08.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ, "ಐದು (05) ವರ್ಷಗಳ ಕಾಲ" ಮುಂದೂಡಿ ಅವರ ಅಮಾನತ್ತಿನ ಅವಧಿ ದಿನಾಂಕ 03.06.2010 ರಿಂದ 02.10.2010ರವರೆಗೆ ಒಟ್ಟು 122 ದಿನಗಳನ್ನು ಅಮಾನತ್ತು ಎಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 26.04.2013ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಆಪಾದನೆ (1), ರುಜುವಾತಾಗಿರುವುದಿಲ್ಲ. ಆಪಾದನೆ (2), ಇದು ರುಜುವಾತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ತಮ್ಮ ವಿಚಾರಣಾ ವರದಿಯಲ್ಲಿ ಈ ಸಾಕ್ಷಿಗಳ ಮುಖ್ಯ ಹೇಳಿಕೆಗಳನ್ನಾಗಲೀ ಅಥವಾ ಆರೋಪಿತ ಅಧಿಕಾರಿ ಮಾಡಿದ ಪಾಟಿ ಸವಾಲಿನಲ್ಲಿರುವ ವಿವರಗಳ ಬಗ್ಗೆಯಾಗಲೀ, ಎಲ್ಲಿಯೂ ವಿಶ್ಲೇಷಿಸಿರುವುದಿಲ್ಲ. ಕೇವಲ ಸಾಕ್ಷಿದಾರರ ಹೇಳಿಕೆಗಳಿಂದ 2ನೇ ಆರೋಪ ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುವುದು ಇಲಾಖಾ ವಿಚಾರಣೆಯ ಕನಿಷ್ಠ ಮಟ್ಟದ ವಿಚಾರಣಾ ವಿಧಿ–ವಿಧಾನಗಳಿಗೆ ದೂರವಾಗಿರುತ್ತದೆ. ಅವರು ತಮ್ಮ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯು ನೀಡಿದ ರಕ್ಷಣಾ ಹೇಳಿಕೆ ಬಗ್ಗೆ ಯಾವುದೇ ವಿಶ್ಲೇಷಣೆಯನ್ನು ಮಾಡಿರುವುದಿಲ್ಲ. ಅಂದರೆ, ಆರೋಪಿತ ಅಧಿಕಾರಿಯ 2ನೇ ಆರೋಪದ ವಿರುದ್ಧ ಯಾವ ರೀತಿಯಲ್ಲಿ ಯಾವ ಸಾಕ್ಷಿದಾರರುಗಳಿಂದ ರುಜುವಾತಾಗಿದೆ ಎಂಬುದನ್ನು ಸ್ಪಷ್ಟಪಡಿಸಲು ವಿಫಲರಾಗಿರುತ್ತಾರೆ.

ಆ.ಪೊ.ಅ.ರವರ ಬಗ್ಗೆ ಅವರ ವೈಯಕ್ತಿಕ ಮಾಹಿತಿಯನ್ನು ಇಂತಹ ವಿಚಾರಣಾ ವರದಿಗಳ ಮೂಲಕ ಬಹಿರಂಗಪಡಿಸಲು ಇಲ್ಲಿ ಆಸ್ಪದ ಇರುವುದಿಲ್ಲ. ಇಲಾಖಾ ವಿಚಾರಣೆಗೆ ನಿಗದಿಪಡಿಸಿದ ಕಾನೂನಿನ ಚೌಕಟ್ಟಿನಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಇಲ್ಲಿ ಆದಾವುದೊಂದನ್ನೂ ಗಮನಿಸದೇ, ಯಾವುದೇ ವಿಶ್ಲೇಷಣೆ ಮಾಡದೇ, ಸಾಕ್ಷಿ ಮತ್ತು ದಾಖಲೆಗಳನ್ನು ಪರಶೀಲಿಸಿರುವುದಿಲ್ಲ.

ಶಿಸ್ತು ಪ್ರಾಧಿಕಾರವಾಗಲೀ ಅಥವಾ ಮೇಲ್ಮನವಿ ಪ್ರಾಧಿಕಾರವಾಗಲೀ ಆ.ಪೊ.ಅ.ರವರು ನೀಡಿದ ಯಾವುದೇ ಹೇಳಿಕೆಯನ್ನು ಅಥವಾ ರಕ್ಷಣಾತ್ಮಕ ಅಂಶಗಳನ್ನು ಪರಿಶೀಲಿಸದೆ ಮೇಲ್ಮನವಿ ತಿರಸ್ಕರಿಸಿರುವುದು ನ್ಯಾಯಯುತವಾಗಿರುವುದಿಲ್ಲ ಮತ್ತು ಸ್ವಾಭಾವಿಕ ನ್ಯಾಯದ ಅಂಶಗಳಿಗೆ ತದ್ವಿರುದ್ಧವಾಗಿರುತ್ತದೆ.

ಈ ಹಿನ್ನಲೆಯಲ್ಲಿ ಆ.ಪೊ.ಅ.ರವರ ಮೇಲಿನ ಎರಡೂ ಆಪಾದನೆಗಳು ರುಜುವಾತಾಗಿರುವುದಿಲ್ಲ ಎಂಬುದಾಗಿ ಪರಿಗಣಿಸಿ, ಅವರನ್ನು ನಿರ್ದೋಷಿ ಎಂದು ತೀರ್ಮಾನಿಸಿ, ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 124 ಪೊಸಿಅ 2013 ಬೆಂಗಳೂರು, ದಿನಾಂಕ: 30.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವೈ. ಕಾಳೆ, ಸಿಪಿಸಿ–2700, ಇವರು ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರನ್ನು ನಿರ್ದೋಷಿ ಎಂದು ತೀರ್ಮಾನಿಸಿ ಇವರ ಅಮಾನತ್ತಿನ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಲು, ಒಂದು ವೇಳೆ, ಸದರಿಯವರ ಹಕ್ಕಿನಲ್ಲಿರುವ ರಜೆ ಕಡಿಮೆ ಬಿದ್ದಲ್ಲಿ, ವೇತನ ರಹಿತ ರಜೆ ಎಂದು ಪರಿಗಣಿಸಿ, ಆದೇಶಿಸಲು ಸರ್ಕಾರವು ತೀರ್ಮಾನಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

**PR.444**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್.ಆರ್. ಪಾಟೀಲ್, ಪಿಎಸ್ಐ, ಜಾಗೃತ ದಳ ಪೊಲೀಸ್ ಠಾಣೆ, ಹೆಸ್ಕಾಂ, ಹಾವೇರಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರ್ದೇಶಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ: ಇವಿ/08/ಈವ/2010 (ಆ.ಪು.ಸಂ.44/ಈವ/2011) ದಿನಾಂಕ 02.02.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/40/2011–12 (ಓ.ಬಿ.ಸಂಖ್ಯೆ: 36/2011–12) ದಿನಾಂಕ 24.12.2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08.02.2014
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2/)19/2012–13 ದಿನಾಂಕ 18.03.2014

**ಪ್ರಸ್ತಾವನೆ:**

ಶ್ರೀ ಆರ್.ಆರ್. ಪಾಟೀಲ್, ಪಿಎಸ್ಐ, ಜಾಗೃತ ದಳ ಪೊಲೀಸ್ ಠಾಣೆ, ಹೆಸ್ಕಾಂ, ಹಾವೇರಿ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಗಂಗಾವತಿ (ಗ್ರಾ) ಪೊಲೀಸ್ ಠಾಣೆ, ಕೊಪ್ಪಳ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕರ್ತವ್ಯದಲ್ಲಿ ಅಶಿಸ್ತು, ನಿಷ್ಕಾಳಜಿತನ, ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಆರ್.ಆರ್. ಪಾಟೀಲ್, ಪಿಎಸ್ಐ, ಗಂಗಾವತಿ (ಗ್ರಾ) ಪೊಲೀಸ್ ಠಾಣೆಯವರೇ ನೀವು ಗಂಗಾವತಿ (ಗ್ರಾ) ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ 09.12.2008ರಂದು ಸಿಹೆಚ್‌ಸಿ–97, ಸಿಪಿಸಿ–162, 320ರವರನ್ನು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ವಿರುಪಾಪುರಗಡ್ಡಿಯಲ್ಲಿ ವಿದೇಶಿಯರು ಆಗಮಿಸಿ ಅಲ್ಲಿ ವಾಸ್ತವ್ಯ ಮಾಡುತ್ತಿದ್ದರಿಂದ ಅಲ್ಲಿ ಯಾವುದೇ ರೀತಿಯ ಅಕ್ರಮ

ಚಟುವಟಿಕೆಗಳು ನಡೆಯದಂತೆ ನೋಡಿಕೊಳ್ಳಲು ಮತ್ತು ವಿದೇಶಿಯರ ಮೇಲೆ ಹಲ್ಲೆಗಳು ನಡೆಯದಂತೆ ನೋಡಿಕೊಳ್ಳಲು ಬಂದೋಬಸ್ತ್ ಕರ್ತವ್ಯಕ್ಕೆ ನೇಮಿಸಿ ಠಾಣೆಗೆ ಒದಗಿಸಲಾದ ಗರುಡಾ–2 ಬಜಾಜ್ ಪಲ್ಸರ್ ಮೋಟಾರ್ ಸೈಕಲ್ ನಂ. ಕೆಎ37 ಜಿ252ನೇದ್ದನ್ನು ವಿರುಪಾಪುರಗಡ್ಡೆಯಲ್ಲಿ ಪೆಟ್ರೋಲಿಂಗ್ ಕರ್ತವ್ಯ ನಿರ್ವಹಿಸಲು ನೀಡಲಾಗಿತ್ತು. ದಿನಾಂಕ 15.12.2008ರಂದು ಸಿಪಿಸಿ–320 ಕೃಷ್ಣಕಿಶೋರ, ಗಂಗಾವತಿ (ಗ್ರಾ) ಪೊಲೀಸ್ ಠಾಣೆಯವರು ಗರುಡಾ–2 ಮೋಟಾರ್ ಸೈಕಲ್ ನಡೆಸಿಕೊಂಡು ಸಾಣಾಪುರು ಗ್ರಾಮದಿಂದ ಗಂಗಾವತಿಗೆ ಬರುವಾಗ ಸಾಣಾಪುರ ಗ್ರಾಮದಲ್ಲಿ ಒಬ್ಬ ಖಾಸಗಿ ವ್ಯಕ್ತಿಯಾದ ನಾಗರಾಜ ತಂದೆ ಹನುಮಂತಪ್ಪ ಸಾ॥ ವಿರುಪಾಪುರ ಎಂಬುವವರನ್ನು ಮೋಟಾರ್ ಸೈಕಲ್ ಮೇಲೆ ಹಿಂದುಗಡೆ ಕೂಡ್ರಿಸಿಕೊಂಡು ಗಂಗಾವತಿಗೆ ಬರುತ್ತಿರುವಾಗ ಸಾಣಾಪುರು ಸೀಮಾದ ವಿರುಪಾಪುರು ಕ್ರಾಸ್ ಹತ್ತಿರ ರಸ್ತೆಯ ಪಕ್ಕದ ಒಂದು ಬಂಡೆಗಲ್ಲಿಗೆ ಮೋಟಾರ್ ಸೈಕಲ್‌ನ್ನು ಟಕ್ಕರ ಕೊಟ್ಟು ಅಪಘಾತ ಮಾಡಿದ್ದು ಆಗ ಇಬ್ಬರಿಗೂ ಸಣ್ಣಪುಟ್ಟ ಗಾಯವಾಗಿದ್ದು ಇರುತ್ತದೆ. ಸದರಿ ಸಿಪಿಸಿ–320 ಕೃಷ್ಣಕಿಶೋರ್‌ರವರು ಮೋಟಾರ್ ಸೈಕಲನ್ನು ಅಪಘಾತದಲ್ಲಿ ದುಃಖಃಪಾತಗೊಳಿಸಿದ ಬಗ್ಗೆ ನಿಮಗೆ ಗೊತ್ತಿದ್ದರೂ ಸಹ ಯಾವುದೇ ಕ್ರಮ ಜರುಗಿಸದೆ ಇರುವುದು ಹಾಗೂ ದಿನಾಂಕ 22.12.2008ರಂದು ಗಾಯಾಳುವಾದ ಶ್ರೀ ನಾಗರಾಜ ಈತನು ನೀಡಿದ ಫಿರ್ಯಾದಿಯ ಮೇಲಿಂದ ಗಂಗಾವತಿ (ಗ್ರಾ) ಪೊಲೀಸ್ ಠಾಣೆ ಗುನ್ನೆ ಸಂ: 322/2008 ಕಲಂ 279, 337, 338 ಐಪಿಸಿ ನೇದ್ದರ ಅಡಿಯಲ್ಲಿ ದಾಖಲಾದ ಪ್ರಕರಣದ ಮಾಹಿತಿಯನ್ನು ಹಾಗೂ ಎಫ್.ಐ.ಆರ್.ಅನ್ನು ಮೇಲಾಧಿಕಾರಿಗಳಿಗೆ ನಿವೇದಿಸಿಕೊಳ್ಳದೆ ಅಪಘಾತ ಪಡಿಸಿದ ಸಿಪಿಸಿ–320 ರವರಿಗೆ ದಿನಾಂಕ 17.12.2008ರಿಂದ 6 ದಿವಸ ಸಾಂಧರ್ಬಿಕ ರಜೆಯನ್ನು ಮಂಜೂರಿಸಿದ್ದು ಇರುತ್ತದೆ. ಇದರಿಂದ ನೋಡಲಾಗಿ ಶ್ರೀ ಆರ್.ಆರ್. ಪಾಟೀಲ್, ಪಿಎಸ್ಐ, ಗಂಗಾವತಿ (ಗ್ರಾ) ಪೊಲೀಸ್ ಠಾಣೆಯವರು ದಿನಾಂಕ 15.12.2008ರಂದು ಸಿಪಿಸಿ–320 ಶ್ರೀ ಕೃಷ್ಣಕಿಶೋರ, ಗಂಗಾವತಿ (ಗ್ರಾ) ಪೊಲೀಸ್ ಠಾಣೆಯವರು ಸರಕಾರಿ ವಾಹನ ಸಂಖ್ಯೆ ಕೆಎ37 ಜಿ252ನೇದ್ದನ್ನು ಅಪಘಾತ ಪಡಿಸಿದ ಬಗ್ಗೆ ಹಾಗೂ ಇವರ ವಿರುದ್ಧ ಪೊಲೀಸ್ ಠಾಣೆಯಲ್ಲಿ ಗುನ್ನೆ ದಾಖಲಾದ ಬಗ್ಗೆ ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿಯನ್ನು ಸಲ್ಲಿಸದೆ ಅಶಿಸ್ತು ಪ್ರದರ್ಶಿಸಿದ್ದು ಅತೀ ನಿಷ್ಕಾಳಜಿತನ, ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿದ್ದು ಇರುತ್ತದೆ."

ಇಲಾಖಾ ವಿಚಾರಣೆಯಲ್ಲಿ ಆಪೊಅ ರವರುಗಳ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02.02.2011ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡಿದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24.12.2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ವಾಹನ ಅಪಘಾತವಾಗಿರುವ ಮಾಹಿತಿ ಆ.ಪೊ.ಅ.ರವರಿಗೆ ತಿಳಿದಿರುವುದು ಸ್ಪಷ್ಟವಾಗಿರುತ್ತದೆ ಮತ್ತು ಗಾಯಗೊಂಡ ಕೃಷ್ಣ ಕಿಶೋರನಿಗೆ 6 ದಿನಗಳ ಸಾಂಧರ್ಬಿಕ ರಜೆಯನ್ನು ಮಂಜೂರು ಮಾಡಿರುವುದು ಇದನ್ನು ಧೃಡಪಡಿಸುತ್ತದೆ. ನಾಗರಾಜು ಠಾಣೆಗೆ ಬಂದು ದೂರು ನೀಡಿದಾಗ ಅನ್ಯ ಮಾರ್ಗವಿಲ್ಲದೆ ಪ್ರಕರಣ ದಾಖಲಿಸಿರುವುದು ಸ್ಪಷ್ಟವಾಗಿರುತ್ತದೆ. ಆ.ಪೊ.ಅ.ರವರು ಅಪಘಾತದ ವಿಷಯವನ್ನು ಮೇಲಾಧಿಕಾರಿಗಳಿಗೆ ತಕ್ಷಣ ತಿಳಿಸದೆ ಮತ್ತು ದೂರನ್ನು ದಾಖಲಿಸದೆ ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿರುವುದು ಇಲಾಖಾ ವಿಚಾರಣೆಯಲ್ಲಿ ಧೃಢಪಟ್ಟಿರುವುದರಿಂದ ಹಾಗೂ ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥ ಕಾರಣಗಳು ಇರದ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 71 ಪೊಸಿಅ 2012 ಬೆಂಗಳೂರು, ದಿನಾಂಕ: 12.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಆರ್. ಪಾಟೀಲ್, ಪಿಎಸ್ಐ, ಜಾಗೃತ ದಳ ಪೊಲೀಸ್ ಠಾಣೆ, ಹೆಸ್ಕಾಂ, ಹಾವೇರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

PR.439

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ನಡಗಡ್ಡಿ, ಪಿಎಸ್ಐ, ಮುಂಡರಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ, ಕೊಪ್ಪಳ, ಇವರ ಆದೇಶ ದಿನಾಂಕ ಸಿಬ್ಬಂದಿ–4/ಶಿಕ್ಷೆ/210/2011 (ಆ.ಪು.ಸಂಖ್ಯೆ: 1448/2011) ದಿನಾಂಕ 23.12.2011

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/14/ಈವ/2012/4564 (ಆ.ಪು.ಸಂಖ್ಯೆ: 586/ಈವ/2012) ದಿನಾಂಕ 22.12.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14.06.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)19/2013–14 ದಿನಾಂಕ 02.01.2014 ಮತ್ತು 02.04.2014

**ಪ್ರಸ್ತಾವನೆ:**

ಶ್ರೀ ಹೆಚ್.ಎಸ್. ನಡಗಡ್ಡಿ, ಪಿಎಸ್ಐ, ಮುಂಡರಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಯಲಬುರ್ಗ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿತನ ಹಾಗೂ ಕರ್ತವ್ಯಲೋಪ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಯಲಬುರ್ಗ ಪೊಲೀಸ್ ಠಾಣೆ ಗುನ್ನೆ ಸಂ.96/10, ಕಲಂ 394 ಐಪಿಸಿ ನೇದ್ದರ ಪ್ರಕರಣದಲ್ಲಿಯ ಆರೋಪಿತರಿಗೆ ಮಾನ್ಯ ನ್ಯಾಯಾಲಯದಿಂದ ಶಿಕ್ಷೆ ಆಗಿದ್ದರಿಂದ ಈ ಆರೋಪಿತರ ಮೂಲ ಬೆರಳು ಮುದ್ರೆಯ ಪ್ರಪತ್ರಗಳನ್ನು ಪಡೆದು ಬೆರಳು ಮುದ್ರೆ ತಜ್ಞರು, ಬೆಂಗಳೂರು ರವರಿಗೆ ಸಲ್ಲಿಸುವ ಕುರಿತು ಸಲ್ಲಿಸಿದ ಮಾಹಿತಿಯು ಅಪೂರ್ಣವಾಗಿದ್ದರಿಂದ ಸದರಿ ಮಾಹಿತಿಯನ್ನು ಸುತ್ತೋಲೆಯ ಪ್ರಕಾರ ಆರೋಪಿತರ ಮೂಲ ಬೆರಳು ಮುದ್ರೆಗಳನ್ನು ಲಗತ್ತಿಸಿ ಮಾಹಿತಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ನೀವು ಸದರಿ ಮಾಹಿತಿಯನ್ನು ಸಲ್ಲಿಸದೇ ಇರುವಾಗ, ದಿನಾಂಕ: 01.11.2011 ಹಾಗೂ 10.11.2011 ರಂದು ಜ್ಞಾಪನವನ್ನು ನೀಡಿದ್ದು, ಆದರೂ ಈವರೆಗೂ ಸದರಿ ಮಾಹಿತಿಯನ್ನು ಡಿ.ಸಿ.ಆರ್.ಬಿ. ಘಟಕಕ್ಕೆ ಸಲ್ಲಿಸದೇ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿತನ ಹಾಗೂ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 23.12.2011ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೂರು (3) ವರ್ಷಗಳ ಅವಧಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22.12.2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು (1) ವರ್ಷ ಕಾಲ ಮೂಂದೂಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 80 ಪೊಸಿಅ 2013 ಬೆಂಗಳೂರು, ದಿನಾಂಕ: 12.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಎಸ್. ನಡಗಡ್ಡಿ, ಪಿಎಸ್ಐ, ಮುಂಡರಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

**PR.437** ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಪಾರ್ವತಮ್ಮ, ಮಪಿಎಸ್ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/14/2011 (ಓ.ಬಿ.ಸಂ.467/2011) ದಿನಾಂಕ 17.11.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಇವರ ಆದೇಶ ಸಂಖ್ಯೆ: ಅಪೀಲು/46/ಶಿಕ್ಷೆ/2012 (ಓ.ಬಿ. ಸಂಖ್ಯೆ: 98/2012–13) ದಿನಾಂಕ 12.10.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)32/2013–14 ದಿನಾಂಕ 11.03.2014

**ಪ್ರಸ್ತಾವನೆ:**

ಶ್ರೀ ಎಸ್. ಪಾರ್ವತಮ್ಮ, ಮಪಿಎಸ್ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹುಳಿಯಾರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ಹುಳಿಯಾರು ಪೊಲೀಸ್ ಠಾಣೆ ಮೊ.ಸಂ. 41/11 ಕಲಂ 21 ಮೈನ್ಸ್ ಅಂಡ್ ಮಿನಿರಲ್ಸ್ ಆಕ್ಟ್ 1957 ರೆ/ವಿ 379, 511 ಐಪಿಸಿ ಪ್ರಕರಣ ದಾಖಲಿಸುವುದರ ಮೂಲಕ ಅಧಿಕಾರ ದುರುಪಯೋಗ ಮತ್ತು ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಹಾಗೂ ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17.11.2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 6 (ಆರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 12.10.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ Mines & Minierals ACT 1957ರ ಕಲಂ 31ರನ್ವಯ ಪಿ.ಎಸ್.ಐ.ವೃಂದದ ಅಧಿಕಾರಿಗಳಿಗೆ ಸ್ವಪ್ರೇರಣೆಯಿಂದ ಪ್ರಕರಣದ ದಾಖಲಿಸಲು ಅಧಿಕಾರವಿರುವುದಿಲ್ಲ. ಆ.ಪೊ.ಅ.ರವರು ಇಲಾಖೆಯು ನೀಡಿರುವ ನಿರ್ದೇಶನಗಳಂತೆ ಕ್ರಮವಹಿಸಬೇಕಾಗಿದ್ದು, ಇದನ್ನು ಪಾಲಿಸದೇ ಕರ್ತವ್ಯಲೋಪ ಎಸಗಿರುವುದು ಸಾಬೀತಾಗಿರುವುದರಿಂದ ಹಾಗೂ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆಗಳು ಇರದ ಕಾರಣ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 99 ಪೊಸಿಅ 2013 ಬೆಂಗಳೂರು, ದಿನಾಂಕ: 12.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಪಾರ್ವತಮ್ಮ, ಮಪಿಎಸ್‌ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

PR.440

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಆರ್. ಮಿಸ್ಕಿನ್, ಸಿಪಿಸಿ–1604(2264), ಹಾಗೂ ಶ್ರೀ ಎಂ.ಆರ್. ದೊಡ್ಡಮನಿ, ಸಿಪಿಸಿ–2287, ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ, ಇವರ ಆದೇಶ ಸಂಖ್ಯೆ: ಸಿಪಿ/ಸಿಬ್ಬಂದಿ–3/ನಿಯಮ–6/15/2009 (ಆದೇಶ ಪುಸ್ತಕ ಸಂಖ್ಯೆ: 662/2012) ದಿನಾಂಕ 05.07.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/4/2012–13 (ಓ.ಬಿ.ಸಂಖ್ಯೆ: 23/2013–14) ದಿನಾಂಕ 31.07.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿದಾರರುಗಳ ಅರ್ಜಿ ದಿನಾಂಕ: 16.09.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)60/2013–14 ದಿನಾಂಕ 04.03.2014

**ಪ್ರಸ್ತಾವನೆ:**

ಶ್ರೀ ಆರ್.ಎಂ. ಮಿಸ್ಕೀನ, ಸಿಪಿಸಿ–1604(2264) ಹಾಗೂ ಶ್ರೀ ಎಂ.ಆರ್. ದೊಡ್ಡಮನಿ, ಸಿಪಿಸಿ–2287, ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಧಾರವಾಡ ನಗರ ಇವರುಗಳು (ಇನ್ನು ಮುಂದೆ ಅರ್ಜಿದಾರರುಗಳೆಂದು ಕರೆಯಲ್ಪಡುವ) ಇವರುಗಳು ಈ ಹಿಂದೆ ಉಪನಗರ ಪೊಲೀಸ್ ಠಾಣೆ, ಧಾರವಾಡ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ಶ್ರೀ ಆರ್.ಎಂ. ಮಿಸ್ಕೀನ, ಸಿಪಿಸಿ–2264 ಹಾಗೂ ಸಿಪಿಸಿ–2287, ಎಂ.ಆರ್.ದೊಡ್ಡಮನಿ, ಇಬ್ಬರೂ ಉಪನಗರ ಪೊಲೀಸ್ ಠಾಣೆ ಧಾರವಾಡ ರವರುಗಳಾದ ನೀವು ಪೊಲೀಸ್ ಇಲಾಖೆಯಲ್ಲಿ ಜವಾಬ್ದಾರಿಯುತ ಶಿಸ್ತಿನ ಹಾಗೂ ಕಾನೂನು ಪಾಲಿಸುವ ನೌಕರರಾಗಿದ್ದು, ಹುಬ್ಬಳ್ಳಿ ನಗರದ ಕೇಶ್ವಾಪೂರ ಪೊಲೀಸ್ ಠಾಣೆಯ ಗುನ್ನಾ ನಂ: 145/09 ಕಲಂ: 420 ಐಪಿಸಿ ಮತ್ತು 2(16)(ಬಿ),9,39 ಸಹ ಕಲಂ 51 ವನ್ಯಜೀವಿ ಸಂರಕ್ಷಣಾ ಕಾಯ್ದೆ ಪ್ರಕರಣವು ದಿನಾಂಕ 07.10.2009ರಂದು ನಿಮ್ಮ ಮೇಲೆ ಆರೋಪಿಯೆಂದು ದಾಖಲಿಸಿದ್ದು, ಒಂದು ಕ್ರಿಮಿನಲ್ ಪ್ರಕರಣದಲ್ಲಿ ಶಾಮೀಲಾಗಿ ಘೋರ ಅಪರಾಧ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

2) ಭಾರತದ ಸಂವಿಧಾನದ ಪ್ರಕಾರ ಕಾನೂನನ್ನು ಜಾರಿ ಮಾಡುವಂತಹ ಒಂದು ಮಹತ್ತರವಾದ ಹಾಗೂ ಜವಾಬ್ದಾರಿಯುತವಾದ ಕರ್ತವ್ಯ ನಿರ್ವಹಿಸುವ ಪೊಲೀಸ್ ಇಲಾಖೆಯ ನೌಕರರಾಗಿದ್ದು ಸಂವಿಧಾನ ಹಾಗೂ ಕಾನೂನು ವಿರುದ್ಧ ಕಾರ್ಯವೆಸಗಿ, ಸಾರ್ವಜನಿಕ ಆಸ್ತಿ–ಪಾಸ್ತಿ, ಪ್ರಾಣ ರಕ್ಷಣೆ, ಹಾಗೂ ಕಾನೂನು ಸುವ್ಯವಸ್ಥೆಯ ಶಿಸ್ತಿನ ಇಲಾಖೆಯಲ್ಲಿರುವ ನೀವು ಸಾರ್ವಜನಿಕರಿಗೆ ಮೋಸ ಮಾಡಿ, ಸಮಾಜ ಘಾತಕ ವ್ಯಕ್ತಿಗಳೊಂದಿಗೆ ಶ್ಯಾಮೀಲಾಗಿ ನಿಮ್ಮ ಕರ್ತವ್ಯದಲ್ಲಿ ಚ್ಯುತಿ ಎಸಗಿ, ಪೊಲೀಸ್ ಇಲಾಖೆಗೆ ಕಳಂಕ ತಂದಿದ್ದಲ್ಲದೇ ಇಲಾಖೆಯ ಘನತೆ ಹಾಗೂ ಗೌರವಕ್ಕೆ ಧಕ್ಕೆಯಾಗುವಂತೆ ಘೋರ ದುರ್ನಡತೆಯನ್ನು ಪ್ರದರ್ಶಿಸಿದ್ದೀರಿ.

3) ದಿನಾಂಕ 07.10.2009ರಂದು ಮದ್ಯಾಹ್ನ 01:00 ಗಂಟೆಯಿಂದ ರಾತ್ರಿ 09:00 ಗಂಟೆಯವರೆಗೆ ಕರ್ತವ್ಯದ ಮೇಲೆ ಇರಬೇಕಾಗಿದ್ದು, ತಮ್ಮ ಕರ್ತವ್ಯಕ್ಕೆ ಗೈರುಹಾಜರುಳಿದು, ಕರ್ತವ್ಯ ಚ್ಯುತಿ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿರುವಿರಿ ಅಂತಾ ಈ ದೋಷಾರೋಪಣೆಯನ್ನು ಹೊರಡಿಸಿದ್ದು ಅದೆ.

4) ಅಮಾನತ್ ಆದೇಶವನ್ನು ದಿನಾಂಕ 12.10.2009ರಂದು ಸ್ವೀಕರಿಸಿದ ನಂತರ ಪ್ರತಿದಿನದ ಹಾಜರಿಗೆ ಧಾರವಾಡ ಉಪನಗರ ಪೊಲೀಸ್ ಠಾಣೆ, ಪೊಲೀಸ್ ಇನ್ಸ್‌ಪೆಕ್ಟರ್ ರವರ ಮುಂದೆ ತಪ್ಪದೇ ಹಾಜರಿರುವಂತೆ ಅಮಾನತ್ ಆದೇಶದಲ್ಲಿ ತಿಳಿಸಲಾಗಿತ್ತು. ಆದರೆ ತಾವು ದಿನಾಂಕ 27.10.2009ರಂದು ಧಾರವಾಡ ಉಪನಗರ ಪೊಲೀಸ್ ಠಾಣೆಗೆ ಹಾಜರಿ ನೀಡಿದ್ದು, ದಾಖಲಾತಿಯಿಂದ ಕಂಡು ಬಂದಿರುತ್ತದೆ. ನೀವು ದಿನಾಂಕ 13.10.2009ರಂದು ಧಾರವಾಡ ಉಪನಗರ ಪೊಲೀಸ್ ಠಾಣೆಗೆ ಹಾಜರಿಗೆ ಹಾಜರಾಗದೇ, ಮೇಲಾಧಿಕಾರಿಗಳು ನೀಡಿದ ಆದೇಶದಲ್ಲಿಯ ಸೂಚನೆಗಳನ್ನು ಪಾಲಿಸದೇ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ತೋರಿಸಿರುತ್ತೀರಿ.

5) ನೀವು ದಿನಾಂಕ 07.10.2009ರ ಮದ್ಯಾಹ್ನ 02:00 ಗಂಟೆಯಿಂದ ದಿನಾಂಕ 12.10.2009ರ ವರೆಗೆ ನಿಮ್ಮ ಮೇಲಾಧಿಕಾರಿಗಳಿಂದ ಪೂರ್ವಾನುಮತಿ ಪಡೆಯದೇ ರಜೆಗಾಗಿ ಅರ್ಜಿ ಸಲ್ಲಿಸದೇ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ತೋರ್ಪಡಿಸಿರುತ್ತೀರಿ

ಇಲಾಖಾ ವಿಚಾರಣೆಯಲ್ಲಿ ಆಪೊಅ ರವರುಗಳ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರುಗಳು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ-ಧಾರವಾಡ ನಗರ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 05.07.2012ರ ಆದೇಶದಲ್ಲಿ ಕೆಳಕಂಡಂತೆ ದಂಡನೆಯನ್ನು ವಿಧಿಸಿರುತ್ತಾರೆ.

1) ಶ್ರೀ ಆರ್.ಎಂ. ಮಿಸ್ಕಿನ್, ಸಿಪಿಸಿ-2264 ಹಾಗೂ ಎಂ.ಆರ್. ದೊಡ್ಡಮನಿ, ಸಿಪಿಸಿ-2287 ಧಾರವಾಡ ಉಪನಗರ ಪೊಲೀಸ್ ಠಾಣೆ, ಹಾಲಿ ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ರವರುಗಳ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಠ ವೇತನಕ್ಕೆ (ರೂ.11,600/- ರಿಂದ ರೂ.21,000/-ರವರೆಗಿನ ಶ್ರೇಣಿ) ಇಳಿಸಿ, ಸದರಿಯವರುಗಳು ಸಿಪಿಸಿ ಹುದ್ದೆಯ ವೇತನ ಶ್ರೇಣಿಯಲ್ಲಿ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯಲು ಅರ್ಹರಾಗಿರುತ್ತಾರೆ.

2) ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರ್ ಅವಧಿ ದಿನಾಂಕ 07.10.2009ವನ್ನು ಅನಧಿಕೃತ ಗೈರು ಹಾಜರ್ ಎಂದೇ ಪರಿಗಣಿಸಲಾಗಿದೆ.

3) ಸದರಿಯವರುಗಳ ಅಮಾನತ್ ಅವಧಿ ದಿನಾಂಕ 07.10.2009 (ದಸ್ತಗಿರಿಯಾದ ವೇಳೆಯಿಂದ)ರಿಂದ ದಿನಾಂಕ 10.04.2010ರವರೆಗಿನ ಒಟ್ಟು 186 ದಿನಗಳನ್ನು ಅಮಾನತ್ ಎಂದೇ ಪರಿಗಣಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 31.07.2013ರ ಆದೇಶದಲ್ಲಿ ಕಾಲಿಕ ವೇತನ ಶ್ರೇಣಿಯಲ್ಲಿ ನಿಯಮಗಳ ಪ್ರಕಾರ ಅನಿರ್ದಿಷ್ಟಾವಧಿಗೆ ಅಥವಾ ಖಾಯಂ ಆಗಿ ವೇತನವನ್ನು ಕೆಳಹಂತಕ್ಕಿಳಿಸಲು ಅವಕಾಶವಿಲ್ಲದಿರುವ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಮೇಲ್ಮನವಿದಾರರುಗಳ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಠ ವೇತನಕ್ಕೆ ಹತ್ತು ವರ್ಷಗಳ ಕಾಲ ಧಕ್ಕೆಯಾಗುವಂತೆ ಇಳಿಸಲಾಗಿದೆ, ಸದರಿಯವರುಗಳು ಶಿಕ್ಷಾವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಯನ್ನು ಪಡೆಯಲು ಅರ್ಹರಿರುವುದಿಲ್ಲವೆಂದು ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ.ರವರುಗಳು ಶಿಸ್ತಿನ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯು ಸಮಾಜಘಾತಕ ವ್ಯಕ್ತಿಗಳೊಂದಿಗೆ ಶಾಮೀಲಾಗಿ ವನ್ಯ ಮೃಗ ಕಾಯ್ದೆಯನ್ನು ಉಲ್ಲಂಘಿಸಿ ಅಪರಾಧ ಎಸಗಿರುವುದು ಸಾಬೀತಾಗಿರುವ ಹಿನ್ನಲೆಯಲ್ಲಿ ಹಾಗೂ ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥ ಕಾರಣಗಳು ಇರದ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 132 ಪೊಸಿಅ 2013 ಬೆಂಗಳೂರು, ದಿನಾಂಕ: 12.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಮಿಸ್ಕೀನ್, ಸಿಪಿಸಿ-1604(2264), ಹಾಗೂ ಶ್ರೀ ಎಂ.ಆರ್. ದೊಡ್ಡಮನಿ, ಸಿಪಿಸಿ-2287, ವಿದ್ಯಾಗಿರಿ ಪೊಲೀಸ್ ಠಾಣೆ, ಹುಬ್ಬಳ್ಳಿ-ಧಾರವಾಡ ನಗರ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.438

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ ವಿನ್ಸಂಟ್, ಸಿಪಿಸಿ–469, ಪಾವಗಡ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/ಡಿಇ/1/2010 (ಓ.ಬಿ.ಸಂಖ್ಯೆ: 409/2012) ದಿನಾಂಕ 28.12.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/01/ಶಿಕ್ಷೆ/2013 (ಓ.ಬಿ.ಸಂಖ್ಯೆ: 84/2013–14) ದಿನಾಂಕ 29.07.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.12.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)78/2013–14 ದಿನಾಂಕ 04.03.2014

**ಪ್ರಸ್ತಾವನೆ:**

ಶ್ರೀ ಎಂ ವಿನ್ಸಂಟ್, ಸಿಪಿಸಿ–469, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಪಾವಗಡ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕರ್ತವ್ಯದಲ್ಲಿ ಘೋರ ದುರ್ನಡತೆ, ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀಯುತ ವಿನ್ಸೆಂಟ್, ಸಿಪಿ.ಸಿ 469, ರವರು ಪಾವಗಡ ಪೊಲೀಸ್ ಠಾಣೆಯಲ್ಲಿ (ಹಾಲಿ ಅಮಾನತ್ತಿನಲ್ಲಿರುತ್ತಾರೆ) ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಇವರು ಈ ಹಿಂದೆ ಓ.ಓ.ಡಿ ಆಧಾರದ ಮೇಲೆ ತುಮಕೂರು ಜಿಲ್ಲಾ ಪೊಲೀಸ್ ಕಛೇರಿಯ ಡಿ.ಸಿ.ಐ.ಬಿ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಿ.ಪಿ.ಐ ಕ್ಯಾತ್ಸಂದ್ರ ವೃತ್ತರವರು ಉಲ್ಲೇಖ (2)ರಲ್ಲಿ ಕ್ಯಾತ್ಸಂದ್ರ ಪೊಲೀಸ್ ಠಾಣಾ ಮೊ.ನಂ: 353/2009, ಕಲಂ:395 ಐ.ಪಿ.ಸಿ ಕೇಸಿನಲ್ಲಿ ಆರೋಪಿ ಸಂತೋಷ್ @ ಮುನ್ನಾ ಬಿನ್ ಬಿ.ಎಂ. ರಾಜು, ಕೆಂಚನಹಳ್ಳಿ, ಮೌನೇಶ್ ಮತ್ತು ಸುರೇಶ್ ಎಂಬುವವರನ್ನು ದಸ್ತಗಿರಿ ಮಾಡಿದ್ದು, ಕೇಸಿನ ವಿಚಾರಣೆ ಸಮಯದಲ್ಲಿ ಆರೋಪಿ ಸಂತೋಷ್ @ ಮುನ್ನಾ ಎಂಬುವವನು ಮೇಲ್ಕಂಡ ಪ್ರಕರಣದಲ್ಲಿ ಫಿರ್ಯಾದಿಯಿಂದ ಚಿನ್ನದ ಸರವನ್ನು ಕಿತ್ತುಕೊಂಡು, ಕಿತ್ತುಕೊಂಡಿದ್ದ ಸರವನ್ನು ತುಮಕೂರಿನ ಗುಂಚಿಸರ್ಕಲ್‌ನಲ್ಲಿರುವ ಜೆ.ಸಿ. ಜ್ಯೂವಿಲರಿಸ್ ಅಂಗಡಿಯಲ್ಲಿ ಆ.ಪೊ.ಅರವರ ಪರಿಚಯದ ಮೇಲೆ 8,000.00/– ರೂಗಳಿಗೆ ಮಾರಾಟ ಮಾಡಿರುವುದಾಗಿ ಹೇಳಿಕೆ ನೀಡಿದ್ದು, ಈ ಬಗ್ಗೆ ಪಿ.ಐ ಡಿ.ಎಸ್.ಬಿ. ಜಿಲ್ಲಾ ಪೊಲೀಸ್ ಕಛೇರಿ ತುಮಕೂರುವವರು ಪೂರ್ವಭಾವಿ ವಿಚಾರಣೆ ನಡೆಸಿ ವರದಿ ಸಲ್ಲಿಸಿದ್ದು, ಅದರಲ್ಲಿ ಮೇಲಿನ ಆರೋಪವು ಆ.ಪೊ.ಅರವರ ವಿರುದ್ಧ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ಉಲ್ಲೇಖ (3)ರಲ್ಲಿ ತಮ್ಮ ವರದಿಯಲ್ಲಿ ಅಭಿಪ್ರಾಯ ಕೊಟ್ಟಿರುತ್ತಾರೆ."

ಇಲಾಖಾ ವಿಚಾರಣೆಯಲ್ಲಿ ಆಪೊಅ ರವರುಗಳ ಮೇಲಿನ ಆಪಾದನೆಗಳು ದೃಡ ಪಟ್ಟಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ಆದರೆ ಇದನ್ನು ಪರಿಗಣಿಸದ ಪ್ರಾಧಿಕಾರ Further summing–up ಮೂಲಕ ಆರೋಪ ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧಿಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28.12.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ (with effect) 2 (ಎರಡು) ವರ್ಷಗಳ ಕಾಲ ಮುಂದೂಡಿ, ದಿನಾಂಕ 12.01.2010ರಿಂದ ದಿನಾಂಕ 28.07.2010ರವರೆಗಿನ ಅಮಾನತ್ತು ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.07.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥ ಕಾರಣಗಳು ಇರದ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 178 ಪೊಸಿಅ 2013 ಬೆಂಗಳೂರು, ದಿನಾಂಕ: 03.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ ವಿನ್ಸಂಟ್, ಸಿಪಿಸಿ–469, ಪಾವಗಡ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.442

**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ**

**ವಿಷಯ:** ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳ ನಿರ್ವಹಣಾ ವೆಚ್ಚಕ್ಕೆ ಒಂದು ಬಾರಿಗೆ ಸಹಾಯಧನ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಸಕಇ 164 ಬಿಎಂಎಸ್ 2010, ದಿನಾಂಕ 29.10.2010
2. ದಿನಾಂಕ 12.07.2013ರಂದು ಮಂಡಿಸಿದ ಆಯವ್ಯಯ ಭಾಷಣದ ಕಂಡಿಕೆ 292.
3. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕಕಡತ ಸಂ.ಹಿಂವಕಇ /ಸಮನ್ವಯ–5/ಸಿಆರ್–232: 2013–14, ದಿನಾಂಕ 02.01.2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರ ಆದೇಶದಲ್ಲಿ ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳ ನಿರ್ವಹಣೆ ವೆಚ್ಚಕ್ಕೆ ಒಂದು ಬಾರಿಗೆ ತಲಾ ರೂ.2.00 ಲಕ್ಷದಂತೆ 11 ಸಂಸ್ಥೆಗಳಿಗೆ ಸಹಾಯಧನವನ್ನು ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಮಂಜೂರು ಮಾಡಿದೆ. ಈ ಮೇಲಿನಂತೆ ಬಿಡುಗಡೆಯಾದ ಅನುದಾನವನ್ನು ವಿದ್ಯಾರ್ಥಿನಿಲಯದ ನಿರ್ವಹಣೆಗೆ ಅಗತ್ಯವಾದ ಪಾತ್ರೆ, ಪೀಠೋಪಕರಣಗಳ ಪೂರೈಕೆ, ಶೌಚಾಲಯ ವ್ಯವಸ್ಥೆ ಇತ್ಯಾದಿಗಳನ್ನು ಮಾಡಲು ಉಪಯೋಗಿಸಬೇಕೆಂದು ತಿಳಿಸಲಾಗಿತ್ತು.

ದಿನಾಂಕ 12.07.2013ರಂದು ಮಂಡಿಸಿದ ಆಯವ್ಯಯ ಭಾಷಣದ ಕಂಡಿಕೆ 292ರಲ್ಲಿ **"ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಖಾಸಗಿ ವಿದ್ಯಾರ್ಥಿನಿಲಯಗಳ ನಿರ್ವಹಣಾ ವೆಚ್ಚಕ್ಕಾಗಿ ಗರಿಷ್ಠ 5 ಲಕ್ಷ ರೂ.ಗಳವರೆಗೆ ಅನುದಾನ ನೀಡಲಾಗುವುದು." ಎಂದು** ಘೋಷಣೆಯನ್ನು ಮಾಡಲಾಗಿದೆ.

ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಗೆ ಸಹಾಯಧನ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರ.ಸಂ.(3)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ಹಿಂವಕ 10 ಬಿಎಂಎಸ್ 2014 ಬೆಂಗಳೂರು ದಿನಾಂಕ 22–05–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳ ನಿರ್ವಹಣೆ ವೆಚ್ಚಕ್ಕೆ ಒಂದು ಬಾರಿಗೆ ಸಹಾಯಧನ ನೀಡುವ ಕುರಿತು ಮಾರ್ಗಸೂಚಿಗಳನ್ನು ಇದರ ಜೊತೆಗೆ ಲಗತ್ತಿಸಿರುವ **ಅನುಬಂಧ–ಅ, ಅನುಬಂಧ–ಆ ಮತ್ತು ಅನುಬಂಧ**–ಇ ರಲ್ಲಿರುವಂತೆ ಹೊರಡಿಸಿ ಆದೇಶಿಸಿದೆ.

ಸದರಿ ಮಾರ್ಗಸೂಚಿಗಳು ತಕ್ಷಣದಿಂದ ಜಾರಿಗೆ ಬರತಕ್ಕದ್ದು.

ಈ ಸಹಾಯಧನವನ್ನು ಆಯಾ ಆರ್ಥಿಕ ವರ್ಷದಲ್ಲಿ ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225–03–001–0–05 ವಿವಿಧ ಸಮುದಾಯಗಳ ಅಭಿವೃದ್ಧಿ ಇದರಲ್ಲಿ ಒದಗಿಸುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 32 ವೆಚ್ಚ–3/2014 ದಿನಾಂಕ 25–2–2014 ಮತ್ತು ಯೋಜನೆ ಇಲಾಖೆಯ ಟಿಪ್ಪಣಿ ಸಂಖ್ಯೆ ಪಿಡಿ 3 ಐಎಂಎಂ 2014 ದಿನಾಂಕ 20–01–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಬಿ. ರಘುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂ.ಹಿಂವಕ 10 ಬಿಎಂಎಸ್2014 ದಿನಾಂಕ 22–5–2014 ರ**

**ಅನುಬಂಧ–ಅ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಗೆ ಅನುದಾನ ನೀಡುವ ಬಗ್ಗೆ ಮಾರ್ಗಸೂಚಿಗಳು**

**1. ಅರ್ಹತೆ:**

(ಅ)ಈ ಕಾರ್ಯಕ್ರಮದಡಿ ಸಹಾಯಧನ ಪಡೆಯಲು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗೆ ಸೇರಿದ ನೊಂದಾಯಿತ ಸಂಘ / ಸ್ವಯಂ ಸೇವಾ ಸಂಸ್ಥೆ / ಟ್ರಸ್ಟ್‌ಗಳು ಅರ್ಹರಿರುತ್ತವೆ.

(ಆ) ಸಂಸ್ಥೆಯು ವಿದ್ಯಾರ್ಥಿನಿಲಯವನ್ನು ಕನಿಷ್ಠ 5 ವರ್ಷಗಳಿಂದ ನಡೆಸುತ್ತಿರಬೇಕು.

(ಇ) ಈ ಕಾರ್ಯಕ್ರಮದಡಿ ಗರಿಷ್ಠ ರೂ.5.00 ಲಕ್ಷಗಳವರೆಗೆ ಸಹಾಯಧನವನ್ನು ಮಂಜೂರು ಮಾಡಲಾಗುತ್ತದೆ. ವಿದ್ಯಾರ್ಥಿನಿಲಯದ ವಿವಿಧ ವಿದ್ಯಾರ್ಥಿಗಳ ಸಂಖ್ಯಾಬಲಕ್ಕೆ ಮಂಜೂರು ಮಾಡುವ ಗರಿಷ್ಠ ಸಹಾಯಧನ ಈ ಕೆಳಗಿನಂತೆ ಇರುತ್ತದೆ.

| ಕ್ರ.ಸಂ. | ವಿದ್ಯಾರ್ಥಿಗಳ ಸಂಖ್ಯಾಬಲ | ಮಂಜೂರು ಮಾಡಲಾಗುವ ಗರಿಷ್ಠ ಸಹಾಯಧನ (ರೂ.ಲಕ್ಷಗಳಲ್ಲಿ) |
|---|---|---|
| 1 | 25 | 2.00 |
| 2 | 50 | 3.00 |
| 3 | 75 | 4.00 |
| 4 | 100 ಅಥವಾ ಅದಕ್ಕೂ ಮೇಲ್ಪಟ್ಟು | 5.00 |

**2. ಸಹಾಯಧನ ಮಂಜೂರಾತಿಯ ಉದ್ದೇಶ:**

ಈ ಕಾರ್ಯಕ್ರಮದಡಿ ನೀಡಿದ ಸಹಾಯಧನವನ್ನು ಈ ಕೆಳಕಂಡ ಉದ್ದೇಶಗಳಿಗೆ, ಈ ಕೆಳಕಂಡ ಆದ್ಯತೆಯ ಮೇರೆಗೆ ಮಾತ್ರ ಬಳಸತಕ್ಕದ್ದು.

**1)** ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ಪಾತ್ರೆ, ತಟ್ಟೆ ಮತ್ತು ಲೋಟ ಖರೀದಿಗಾಗಿ

**2)** ನೀರಿನ ಸಂಗ್ರಹಣೆಯ ಟ್ಯಾಂಕ್ ನಿರ್ಮಾಣಕ್ಕಾಗಿ/ಖರೀದಿಗಾಗಿ

**3)** ನೀರಿನ ಶುದ್ಧೀಕರಣ ಉಪಕರಣ (Water Purifier) ಖರೀದಿಗಾಗಿ

**4)** ಗ್ರಂಥಾಲಯ ವ್ಯವಸ್ಥೆಗಾಗಿ

**5)** ಊಟದ ಟೇಬಲ್‌ಗಳ ಖರೀದಿಗಾಗಿ

**6)** ಸೋಲಾರ್ ವಾಟರ್ ಹೀಟರ್ ಖರೀದಿಗಾಗಿ

**7)** ಅಡುಗೆ ಅನಿಲ ಒಲೆ ಖರೀದಿಗಾಗಿ

**8)** ಸ್ಟೀಮ್ ಕುಕ್ಕಿಂಗ್ ವ್ಯವಸ್ಥೆ ಮಾಡಲು

**9)** ಕಂಪ್ಯೂಟರ್‌ಗಳ ಖರೀದಿಗಾಗಿ

**10)** ಯು.ಪಿ.ಎಸ್ ಖರೀದಿಗಾಗಿ

**11)** ವಿದ್ಯಾರ್ಥಿಗಳಿಗೆ ಮಂಚಗಳ ಖರೀದಿಗಾಗಿ

**12)** ವಿದ್ಯಾರ್ಥಿನಿಲಯಗಳ ಕೊಠಡಿಗಳಲ್ಲಿ ಅಳವಡಿಸಲು ಫ್ಯಾನ್‌ಗಳ ಖರೀದಿಗಾಗಿ

**13)** ಟೇಬಲ್ ಮತ್ತು ಕುರ್ಚಿಗಳ ಖರೀದಿಗಾಗಿ

**14)** ಶೌಚಾಲಯಗಳ ನಿರ್ಮಾಣ

1. **ಸಹಾಯಧನ ಮಂಜೂರಾತಿಗಾಗಿ ನಿಬಂಧನೆಗಳು:**

**1.** ಸಹಾಯಧನ ಪಡೆಯುವ ಸಂಸ್ಥೆಯು, ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ/ನೊಂದಣಿ ನಿಯಮಗಳನ್ವಯ ನೊಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆಯು ನೊಂದಣಿಯಾಗಿ ಕನಿಷ್ಟ 5 ವರ್ಷಗಳಾಗಿರಬೇಕು.

**2.** ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರಬೇಕು.

**3.** ಸಹಾಯಧನ ಬಯಸುವ ಸಂಘ ಸಂಸ್ಥೆಗಳು/ಟ್ರಸ್ಟ್‌ಗಳು, ಹಿಂದಿನ ಮೂರು ವರ್ಷಗಳ ಆಡಿಟ್ ವರದಿಗಳನ್ನು, ಚಾರ್ಟೆಡ್ ಅಕೌಂಟ್‌ರವರಿಂದ ಆಡಿಟ್ ಮಾಡಿಸಿ ಅರ್ಜಿಯೊಂದಿಗೆ ಸಲ್ಲಿಸಬೇಕು.

**4.** ಸಹಾಯಧನ ಬಯಸುವ ಸಂಘ/ಸಂಸ್ಥೆಗಳು/ಟ್ರಸ್ಟ್‌ಗಳು ಸ್ವಂತ ವಿದ್ಯಾರ್ಥಿನಿಲಯ ಕಟ್ಟಡ ಹೊಂದಿರಬೇಕು ಅಥವಾ ಬಾಡಿಗೆ ಕಟ್ಟಡಗಳನ್ನು ಕನಿಷ್ಠ 10 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆ ಪಡೆದಿರಬೇಕು.

5. ಸಹಾಯಧನ ಪಡೆಯಲಿಚ್ಛಿಸುವ ಸಂಸ್ಥೆಗಳು / ಟ್ರಸ್ಟ್‌ಗಳು **ಅನುಬಂಧ–ಆ** ರ ಅರ್ಜಿ ನಮೂನೆಯಲ್ಲಿ ನಿಗಧಿತ ದಾಖಲಾತಿಯೊಂದಿಗೆ, ಅರ್ಜಿಯನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

6. ಒಂದು ಸಂಘ ಅಥವಾ ಸಂಸ್ಥೆಯು ಈ ಕಾರ್ಯಕ್ರಮದಡಿ **ಒಂದು ಬಾರಿ ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತದೆ.** ಈ ಉದ್ದೇಶಕ್ಕಾಗಿ ಕೇಂದ್ರ /ರಾಜ್ಯ ಸರ್ಕಾರದ ಇತರೆ ಸರ್ಕಾರಿ ಅಥವಾ ಅರೆ–ಸರ್ಕಾರಿ ಸಂಸ್ಥೆಗಳಿಂದ ಸಹಾಯಧನವನ್ನು ಪಡೆದಿರಬಾರದು.

7. ಸಹಾಯಧನವನ್ನು ಸಂಬಂಧಿಸಿದ ಸಂಸ್ಥೆಗೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಬಿಡುಗಡೆ ಮಾಡಲಾಗುವುದು.

8. ಖರೀದಿಸಿದ ವಸ್ತುಗಳ ವಿವರಗಳನ್ನು ದಾಸ್ತಾನು ವಹಿಯಲ್ಲಿ ದಾಖಲಿಸಿ, ನಿರ್ವಹಿಸಬೇಕು.

9. ಸಹಾಯಧನವನ್ನು ಉಪಯೋಗಿಸಿರುವ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಬೇಕು. ಈ ರೀತಿ ಮಾಡುತ್ತಿರುವ ಬಗ್ಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಪ್ರತಿ ಆರು ತಿಂಗಳಿಗೊಮ್ಮೆ ಭೇಟಿ ನೀಡಿ ಪರಿಶೀಲನೆ ಮಾಡತಕ್ಕದ್ದು.

10. ಪ್ರತಿ ವಿದ್ಯಾರ್ಥಿಗೆ ಕನಿಷ್ಠ 40 ಚ.ಅ ಸ್ಥಳಾವಕಾಶವಿರತಕ್ಕದ್ದು ಹಾಗೂ ಇದಕ್ಕೆ ಪೂರಕವಾಗಿ ಪ್ರತ್ಯೇಕ ಅಡುಗೆ ಕೋಣೆ, ಊಟದ ಕೋಣೆ ಮತ್ತು ಶೌಚಾಲಯಗಳನ್ನು ಹೊಂದಿರಬೇಕು.

2. **ಇಲಾಖಾ ಅಧಿಕಾರಿಗಳಿಗೆ ಸೂಚನೆಗಳು:**

1) ಸರ್ಕಾರದ ಸಹಾಯಧನವನ್ನು ಮಂಜೂರು ಮಾಡುವ ಅಧಿಕಾರವನ್ನು ಈ ಕೆಳಗಿನವರಿಗೆ ಈ ಕೆಳಗಿನಂತೆ ವಹಿಸಲಾಗಿದೆ.

(ಅ) ರೂ.2.00 ಲಕ್ಷಗಳವರೆಗೆ – ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

(ಆ) ರೂ.5.00 ಲಕ್ಷಗಳವರೆಗೆ – ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

2) ಈ ಕಾರ್ಯಕ್ರಮದಡಿ, ಸರ್ಕಾರದಿಂದ ಬಿಡುಗಡೆಯಾಗುವ ಮೊತ್ತವನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪಿ.ಡಿ ಖಾತೆಗೆ ಜಮಾ ಮಾಡಿಕೊಂಡು, ಇದಕ್ಕೆ ಅನುಗುಣವಾಗಿ ಸಹಾಯಧನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಮರು ಬಿಡುಗಡೆ ಮಾಡಬೇಕು.

3) ರಾಜ್ಯದ ಎಲ್ಲಾ ಪ್ರದೇಶಗಳಿಗೆ ಸಮಾನಾವಕಾಶ ನೀಡುವ ದೃಷ್ಟಿಯಿಂದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಸರಿಸುಮಾರು ಒಂದೇ ಮೊತ್ತದ ಸಹಾಯಧನವನ್ನು ಮಂಜೂರು ಮಾಡಬೇಕು.

4) ಈ ಸಹಾಯಧನವನ್ನು ಬಿಡುಗಡೆಯಾದ ನಂತರ 6 ತಿಂಗಳ ಒಳಗಾಗಿ ಬಳಕೆ ಮಾಡದಿದ್ದಲ್ಲಿ, ಈ ಮೊತ್ತವನ್ನು ಹಾಗೂ ಆ ಮೊತ್ತದ ಮೇಲಿನ ಶೇ.10ರಷ್ಟು ಬಡ್ಡಿಯನ್ನು ಜಿಲ್ಲಾಧಿಕಾರಿಗಳು ಸಂಸ್ಥೆಯಿಂದ ವಸೂಲಿ ಮಾಡತಕ್ಕದ್ದು.

5) ಬಿಡುಗಡೆ ಮಾಡಿದ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಉಪಯೋಗಿಸಲಾಗಿದೆ ಎಂಬ ಬಗ್ಗೆ ಪೂರ್ಣ ವಿವರಗಳನ್ನು ಹಾಗೂ ಬಳಕೆ ಪ್ರಮಾಣ ಪತ್ರವನ್ನು ಸಂಸ್ಥೆಯವರು ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಮೂಲಕ ಆಯುಕ್ತರಿಗೆ ಸಲ್ಲಿಸಬೇಕು.

6) ಸಂಘ/ಸಂಸ್ಥೆಗಳು ಸಲ್ಲಿಸುವ ಪ್ರಸ್ತಾವನೆಯ ಸಂಬಂಧ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಸ್ಥಳ ಪರಿಶೀಲನೆ ಮಾಡಿ ತಮ್ಮ ಶಿಫಾರಸ್ಸಿನೊಂದಿಗೆ (ಹಾಗೂ ಚೆಕ್‌ಲಿಸ್ಟ್‌ನೊಂದಿಗೆ) ಮತ್ತು ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಪ್ರಸ್ತಾವನೆಯನ್ನು ಆಯುಕ್ತರು/ನಿರ್ದೇಶಕರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು.

7) ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರ/ಆಯುಕ್ತರು, ಸಹಾಯಧನವನ್ನು ಮಂಜೂರು ಮಾಡಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಬೇಕು.

8) ಸಹಾಯಧನವನ್ನು ಮಂಜೂರು ಮಾಡಿದ ಸಂಸ್ಥೆಗೆ ಬಿಡುಗಡೆ ಮಾಡುವ ಮುಂಚೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಸಂಸ್ಥೆಯಿಂದ ಅನುಬಂಧ–ಇ ರಲ್ಲಿರುವಂತೆ ಕನಿಷ್ಠ ರೂ.100/– ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಪಡೆಯಬೇಕು.

9) ಮಂಜೂರಾದ ಸಹಾಯಧನವನ್ನು ಸಂಘ–ಸಂಸ್ಥೆಗಳು ಸರಿಯಾದ ಉದ್ದೇಶಕ್ಕೆ ಬಳಸಿಕೊಳ್ಳುತ್ತಿರುವುದನ್ನು ಖಚಿತಪಡಿಸಿಕೊಳ್ಳಲು, ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಪ್ರತಿ ಆರು ತಿಂಗಳಿಗೊಮ್ಮೆ ಸಂಘ/ಸಂಸ್ಥೆಗೆ ಭೇಟಿ ನೀಡಿ ಪರಿಶೀಲನೆ ಮಾಡಬೇಕು ಮತ್ತು ಈ ಬಗ್ಗೆ ವರದಿಯನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು.

10) ಸರ್ಕಾರದಿಂದ ಸಹಾಯಧನ ಪಡೆದ ಮೇಲೆ ಸಂಸ್ಥೆಯವರು ವಿದ್ಯಾರ್ಥಿನಿಲಯವನ್ನು ಕನಿಷ್ಠ 5 ವರ್ಷ ನಡೆಸದೇ ಹೋದಲ್ಲಿ ಸರ್ಕಾರದಿಂದ ಪಡೆಯಲಾದ ಪೂರ್ಣ ಸಹಾಯಧನವನ್ನು ವಿದ್ಯಾರ್ಥಿನಿಲಯ ಸ್ಥಗಿತಗೊಂಡ ದಿನಾಂಕದಿಂದ ಶೇ.10 ರ ಬಡ್ಡಿ ದರದಲ್ಲಿ ಸರ್ಕಾರಕ್ಕೆ ಹಿಂತಿರುಗಿಸಲು ಬದ್ಧರಾಗಿರಬೇಕು.

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಅನುಬಂಧ–ಆ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಸರ್ಕಾರದ ಆದೇಶ ಸಂ.ಹಿಂವಕ 10 ಬಿಎಂಎಸ್2014 ದಿನಾಂಕ 22–5–2014 ರಂತೆ**

ಗೆ:

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ

. . . . . . . . . . . . . . . ಜಿಲ್ಲೆ.

**ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಗೆ ಅನುದಾನ ಪಡೆಯಲು ಅರ್ಜಿ**

| | | |
|---|---|---|
| 1 | ಸಂಸ್ಥೆಯ ಪೂರ್ಣ ಹೆಸರು :<br>ವಿಳಾಸ:<br>ದೂರವಾಣಿ ಸಂಖ್ಯೆ: | |
| 2 | ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗ/ಜಾತಿಗೆ ಸೇರಿರುತ್ತದೆ } ಪ್ರವರ್ಗ:<br>ಜಾತಿ: | |
| 3 | ಸಂಸ್ಥೆಯ ನೋಂದಣಿ } ಆದೇಶ ಸಂಖ್ಯೆ:<br>ದಿನಾಂಕ: | |
| 4 | ಜಿಲ್ಲಾ ನೋಂದಣಾಧಿಕಾರಿಗೆ ಯಾವ ಅವಧಿಯವರೆಗೆ ಲೆಕ್ಕಪತ್ರ ಸಲ್ಲಿಸಲಾಗಿದೆ. | |
| 5 | ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಅಧ್ಯಕ್ಷರ ಹೆಸರು : | |
| 6 | ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸದ ವಿವರಗಳನ್ನು ಲಗತ್ತಿಸಿದೆಯೇ? | |
| 7 | ಸಂಸ್ಥೆಯ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆಯೇ ಅಥವಾ ಇಲ್ಲವೇ? | |
| 8 | ಸಂಸ್ಥೆಯು ಬೈಲಾ ಪ್ರತಿಯನ್ನು ಲಗತ್ತಿಸಿದೆಯೇ? | |
| 9 | ಸಂಸ್ಥೆಯು ಈ ಹಿಂದೆ ಈ ಉದ್ದೇಶಕ್ಕಾಗಿ ರಾಜ್ಯ/ಕೇಂದ್ರ ಸರ್ಕಾರ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಸಹಾಯಧನ ಪಡೆದಿದೆಯೇ? | |
| 10 | ಕಟ್ಟಡ ಸ್ವಂತದ್ದೇ ಅಥವಾ ಲೀಸ್‌ಗೆ ಪಡೆದಿರುವುದೇ? | |

| | | | |
|---|---|---|---|
| 11 | ವಿದ್ಯಾರ್ಥಿನಿಲಯದ ವಿಳಾಸ | | |
| 12 | ಕಟ್ಟಡವನ್ನು ಲೀಸ್‌ಗೆ ಪಡೆದಿದ್ದಲ್ಲಿ | ಲೀಸ್ ಅವಧಿ:<br>ಲೀಸ್ ಮೇಲೆ ಪಡೆದ ದಿನಾಂಕ:<br>**ಯಾರಿಂದ ಪಡೆಯಲಾಗಿದೆ:** | |
| 13 | ಸಂಸ್ಥೆಯು ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿಯನ್ನು ಲಗತ್ತಿಸಲಾಗಿದೆಯೇ? | | |

ಸರ್ಕಾರ ಈ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳನ್ನು ತಿಳಿದುಕೊಂಡಿರುತ್ತೇನೆ. ಈ ಮೇಲೆ ನಮೂದಿಸಲಾದ ವಿವರಗಳು ಸತ್ಯವಾಗಿರುತ್ತವೆ. ನಮ್ಮ ಸಂಸ್ಥೆಗೆ ಸಹಾಯಧನ ಮಂಜೂರು ಮಾಡಿದಲ್ಲಿ ನಿಗಧಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು, ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಲು ಬದ್ಧನಾಗಿರುತ್ತೇನೆ. ಆದ ಕಾರಣ ಈ ಮೇಲಿನ ಉದ್ದೇಶಕ್ಕಾಗಿ ನಮ್ಮ ಸಂಸ್ಥೆಗೆ ರೂ. . . . . . . . . . . . . . . . . . . . . . . . . . . . ಗಳ ಸಹಾಯಧನ ಮಂಜೂರು ಮಾಡಬೇಕೆಂದು ಕೋರುತ್ತೇನೆ.

*ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿದ ಈ ಕೆಳಕಂಡ ದಾಖಲೆಗಳನ್ನು ಸಲ್ಲಿಸಿದೆ.*

1. ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗಕ್ಕೆ ಸೇರಿರುತ್ತದೆ ಎಂಬ ಬಗ್ಗೆ ದಾಖಲಾತಿ.
2. ಸಂಸ್ಥೆಯ ನೋಂದಣಿ ಪ್ರಮಾಣ ಪತ್ರ.
3. ಜಿಲ್ಲಾ ನೋಂದಣಾಧಿಕಾರಿಗೆ ಹಿಂದಿನ ಸಾಲಿನವರೆಗೆ ಸಲ್ಲಿಸಿರುವ ಲೆಕ್ಕಪತ್ರದ ದೃಢೀಕರಣ ಪತ್ರ.
4. ಸಂಸ್ಥೆಯ ಬೈಲಾ ಪ್ರತಿ.
5. ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸ.
6. ಸರ್ಕಾರದಿಂದ ಸಹಾಯಧನ ಪಡೆಯುವ ಬಗ್ಗೆ ಸಂಸ್ಥೆಯ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಿದ ನಡವಳಿಗಳು.
7. ಸಂಸ್ಥೆಯ ಹೆಸರಿನಲ್ಲಿ ಸ್ವಂತ ಕಟ್ಟಡ ಹೊಂದಿದ್ದಲ್ಲಿ, ಅದರ ನೊಂದಣಿ ಮತ್ತು ಖಾತಾ ಪ್ರಮಾಣ ಪತ್ರ.
8. ಕಟ್ಟಡವನ್ನು ಲೀಸ್‌ಗೆ ಪಡೆದಿದ್ದಲ್ಲಿ, ಅದರ ಒಪ್ಪಂದದ ಕರಾರು ದೃಢೀಕರಣ ಪ್ರತಿ.
9. ಅರ್ಜಿ ಸಲ್ಲಿಸುವ ದಿನಾಂಕದ ಹಿಂದಿನ ಸಾಲಿನವರೆಗೆ ಕಂದಾಯ ಪಾವತಿಸಿರುವ ಬಗ್ಗೆ ರಶೀದಿ ಪ್ರತಿಗಳು.
10. ಸಂಸ್ಥೆಯ ಆರ್ಥಿಕ ಪರಿಸ್ಥಿತಿ ಕುರಿತಂತೆ ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿ. (ಚಾರ್ಟೆಡ್ ಅಕೌಂಟೆಂಟ್ ದೃಢೀಕರಿಸಿರಬೇಕು)

ದಿನಾಂಕ: ಸಹಿ:

ಸ್ಥಳ : ಅಧ್ಯಕ್ಷರು

---

ಕಛೇರಿ ಉಪಯೋಗಕ್ಕಾಗಿ

ಕಡತ ಸಂಖ್ಯೆ: ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ,.

ದಿನಾಂಕ:. . . . . . . . . . . . . . . . ಜಿಲ್ಲೆ,

*ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ವರದಿ ಮತ್ತು ಶಿಫಾರಸ್ಸು*

ಸಹಿ:

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ

*ಜಿಲ್ಲಾಧಿಕಾರಿಗಳ ಶಿಫಾರಸ್ಸು:*

ದಿನಾಂಕ: ಸಹಿ:

ಜಿಲ್ಲಾಧಿಕಾರಿಗಳು

ಕಡತ ಸಂಖ್ಯೆ:

*ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಶಿಫಾರಸ್ಸು*

ದಿನಾಂಕ: ಸಹಿ:

ಆಯುಕ್ತರು

**ಅನುಬಂಧ–ಇ**

**ಸರ್ಕಾರದ ಆದೇಶ ಸಂ.ಹಿಂವಇ 10 ಬಿಎಂಎಸ್2014 ದಿನಾಂಕ 22–5–2014 ರ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ಜನಾಂಗದ ಸಂಘ–ಸಂಸ್ಥೆಗಳು ನಡೆಸುವ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಗೆ ಅನುದಾನ ಪಡೆಯಲು ಸಲ್ಲಿಸಬೇಕಾದ ಪ್ರಮಾಣ ಪತ್ರ**

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, . . . . . ಜಿಲ್ಲೆ ಇವರಿಗೆ, ಅಧ್ಯಕ್ಷರು /ಕಾರ್ಯದರ್ಶಿಗಳು . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . .( ಸಂಘ/ಸಂಸ್ಥೆಯ ಹೆಸರು ಮತ್ತು ವಿಳಾಸ) ಆದ ನಾವು . . . . . . . . . . ಜಿಲ್ಲೆಯ . . . . . . . . . . . ತಾಲ್ಲೂಕಿನ . . . . . . . . . . . ಗ್ರಾಮದಲ್ಲಿ ಅನುದಾನರಹಿತ ಖಾಸಗಿ ವಿದ್ಯಾರ್ಥಿನಿಲಯಕ್ಕೆ ಸರ್ಕಾರದ ಸಹಾಯಧನಕ್ಕಾಗಿ ಅರ್ಜಿ ಸಲ್ಲಿಸಿದ್ದು, ಸರ್ಕಾರ/ಆಯುಕ್ತರು ಈ ಉದ್ದೇಶಕ್ಕಾಗಿ ರೂ. . . . . . . ಲಕ್ಷಗಳ ಸಹಾಯಧನವನ್ನು ಆದೇಶ ಸಂಖ್ಯೆ:. . . . . . . . . . . . . . . . . . . . . , ದಿನಾಂಕ:. . . . . . . . . ರಂತೆ ಮಂಜೂರು ಮಾಡಿರುತ್ತಾರೆ. ಸರ್ಕಾರದ ಆದೇಶದ (ಮಾರ್ಗಸೂಚಿ) ಪ್ರಕಾರ ನಾವು ಈ ಕೆಳಗಿನಂತೆ ಪ್ರಮಾಣ ಪತ್ರವನ್ನು ಸಲ್ಲಿಸುತ್ತಿದ್ದೇವೆ.

1. ನಮ್ಮ ಸಂಸ್ಥೆಯು ಹಿಂದುಳಿದ ವರ್ಗಗಳ ಪ್ರವರ್ಗ– . . . . . . ರ . . . . . ಜಾತಿಗೆ ಸೇರಿದ್ದಾಗಿರುತ್ತದೆ.
2. ನಮ್ಮ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆ.
3. ನಮ್ಮ ಸಂಸ್ಥೆಯು ಇದೇ ಮೊದಲ ಬಾರಿಗೆ ಸರ್ಕಾರದಿಂದ ಸಹಾಯಧನವನ್ನು ಪಡೆದಿರುತ್ತದೆ. ಈ ಉದ್ದೇಶಕ್ಕಾಗಿ ಕೇಂದ್ರ /ರಾಜ್ಯ ಸರ್ಕಾರದ ಇತರೆ ಸರ್ಕಾರಿ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಇದುವರೆಗೆ ಸಹಾಯಧನವನ್ನು ಪಡೆದಿರುವುದಿಲ್ಲ.
5. ಈ ಸಹಾಯಧನವನ್ನು ಬಿಡುಗಡೆಯಾದ ನಂತರ 6 ತಿಂಗಳ ಒಳಗಾಗಿ ಬಳಕೆ ಮಾಡದಿದ್ದಲ್ಲಿ, ಈ ಮೊತ್ತವನ್ನು ಹಾಗೂ ಆ ಮೊತ್ತದ ಮೇಲಿನ ಶೇ.10ರಷ್ಟು ಬಡ್ಡಿಯನ್ನು ಜಿಲ್ಲಾಧಿಕಾರಿಗಳಿಗೆ ಹಿಂತಿರುಗಿಸಲು ಬದ್ಧರಾಗಿರುತ್ತೇವೆ.
6. ಸರ್ಕಾರದಿಂದ ಸಹಾಯಧನ ಪಡೆದ ಮೇಲೆ ವಿದ್ಯಾರ್ಥಿನಿಲಯವನ್ನು ಕನಿಷ್ಠ 5 ವರ್ಷ ನಡೆಸದೇ ಹೋದಲ್ಲಿ ಸರ್ಕಾರದಿಂದ ಪಡೆಯಲಾದ ಪೂರ್ಣ ಸಹಾಯಧನವನ್ನು ವಿದ್ಯಾರ್ಥಿನಿಲಯ ಸ್ಥಗಿತಗೊಂಡ ದಿನಾಂಕದಿಂದ ಶೇ.10 ರ ಬಡ್ಡಿ ದರದಲ್ಲಿ ಸರ್ಕಾರಕ್ಕೆ ಹಿಂತಿರುಗಿಸಲು ಬದ್ಧರಾಗಿರುತ್ತೇವೆ.
7. ಈ ಪ್ರಮಾಣ ಪತ್ರದ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಕಾನೂನಿನ ರೀತ್ಯಾ ಕ್ರಮ ತೆಗೆದುಕೊಳ್ಳಬಹುದು.

ದಿನಾಂಕ: ಸಹಿ: ಸಹಿ:

ಹೆಸರು: ಹೆಸರು:

(ಸಂಸ್ಥೆಯ ಅಧ್ಯಕ್ಷರ) (ಸಂಸ್ಥೆಯ ಕಾರ್ಯದರ್ಶಿ)

(ಮೊಹರಿನೊಂದಿಗೆ) (ಮೊಹರಿನೊಂದಿಗೆ)

(ನೋಟರಿಯಿಂದ ಪ್ರಮಾಣೀಕರಿಸಿರಬೇಕು)

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR.468**
**SC.1000**

## ಕಂದಾಯ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ, ಶ್ರೀ ವ್ಯಾಸರಾಜ ಮಠದ (ಸೋಸಲೆ) ಆಡಳಿತಾಧಿಕಾರಿಯ ಅವಧಿಯನ್ನು ಮುಂದಿನ ಒಂದು ವರ್ಷಗಳ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಕಂಇ 67 ಮುದಾಪ್ರ 2002 ದಿನಾಂಕ: 26.05.2012.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಮೈಸೂರು ಜಿಲ್ಲೆ, ಶ್ರೀ ವ್ಯಾಸರಾಜ ಸೋಸಲೇ ಮಠವನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ದಿನಾಂಕ: 26.05.2012ರಿಂದ ಎರಡು ವರ್ಷಗಳ ಅವಧಿಗೆ ನಿವೃತ್ತ ಐ.ಎ.ಎಸ್. ಅಧಿಕಾರಿಗಳಾದ ಶ್ರೀ ಕೆ. ಜೈರಾಜ್ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿತ್ತು. ಸದರಿ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ: 25.05.2014ಕ್ಕೆ ಮುಕ್ತಾಯವಾಗುವುದರಿಂದ, ಮುಂದಿನ ಒಂದು ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಮುಸೇವಿ 2014, ಬೆಂಗಳೂರು, ದಿನಾಂಕ: 24ನೇ ಮೇ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಕಂಇ 67 ಮುದಾಪ್ರ 2002 ದಿನಾಂಕ: 26.05.2012 ರಲ್ಲಿ ಶ್ರೀ ವ್ಯಾಸರಾಜ ಮಠಕ್ಕೆ (ಸೋಸಲೆ) ಶ್ರೀ ಕೆ. ಜೈರಾಜ್ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿರುವ ಅವಧಿಯನ್ನು ದಿನಾಂಕ: 26.05.2014 ರಿಂದ ಮುಂದಿನ ಒಂದು ವರ್ಷದ ಅವಧಿಗೆ ಮುಂದುವರೆಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.480**
**SC.50**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರ ಆದೇಶ ಸಂಖ್ಯೆ: ಇವಿ/ನಿಯಮ-7/60/2012 (ಆದೇಶ ಪುಸ್ತಕ ಸಂಖ್ಯೆ: 659/2012) ದಿನಾಂಕ 25.06.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/111/ಉವ/2012 ದಿನಾಂಕ 09.11.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.01.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)80/2012-13 ದಿನಾಂಕ: 07.05.2013 ಮತ್ತು 09.01.2014

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 252 ಸಿಎನ್ಎಸ್ 2013 ದಿನಾಂಕ: 21.04.2014

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗುಲ್ಬರ್ಗಾ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ರೋಣಾ ಪೊಲೀಸ್ ಠಾಣೆ, ಗದಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

"ರೋಣ ಠಾಣೆಯ ಗುನ್ನಾ ಸಂ. 51/2007 ಕಲಂ, 379 ಐಪಿಸಿ ಆರೋಪಿಯಾದ ಶ್ರೀ ಹನುಮಂತಪ್ಪ ತಂದೆ ಪಕ್ಕೀರಪ್ಪ ಭಜಂತ್ರಿ ಸಾ: ಬೆಟಗೇರಿ ಈತನನ್ನು ಬಡಾವಣೆ ಠಾಣೆಯ ಸಿಬ್ಬಂದಿಯವರು ಬಂಧಿಸಿ ಸದರಿ ಆರೋಪಿತನಿಂದ ಜಪ್ತಿ ಮಾಡಿದ ಮೋಟಾರ ಸೈಕಲನ್ನು ಹಾಗೂ ಸದರಿ ಪ್ರಕರಣದ ತನಿಖಾ ಕಾಗದ ಪತ್ರಗಳನ್ನು ದಿನಾಂಕ: 31.03.2012ರಂದು ರೋಣ ಠಾಣೆಗೆ ವರ್ಗಾಯಿಸಿದ್ದು ನಂತರ ಸದರಿ ಆರೋಪಿಯನ್ನು ದಿನಾಂಕ: 24.03.2012 ರಿಂದ 02.04.2012 ವರೆಗೆ ಜೆ.ಸಿ. ಕಸ್ಟಡಿಯಲ್ಲಿದ್ದು ನಂತರ ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತಾನೆ.

ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು ಕಳ್ಳತನ ಪ್ರಕರಣದಲ್ಲಿ ಸಿಕ್ಕ ಆರೋಪಿಯನ್ನು ಬಾಡಿ ವಾರಂಟ್ ಮೇಲೆ ನಿಮ್ಮ ವಶಕ್ಕೆ ತೆಗೆದುಕೊಳ್ಳದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರ್ಪಡಿಸಿದ್ದರಿಂದ ಆರೋಪಿಯು ಜಾಮೀನಿನ ಮೇಲೆ ಬಿಡುಗಡೆಯಾಗಲು ಕಾರಣೀಭೂತರಾಗಿರುತ್ತೀರಿ. ಈ ರೀತಿಯಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿ ಕರ್ತವ್ಯಚ್ಯುತಿ ಗೈದ ಅಪರಾಧ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 25.06.2012ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗದಂತೆ (06) ತಿಂಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ದಿನಾಂಕ 09.11.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ಅರ್ಜಿದಾರರು ವಿಚಾರಣೆ ನಡೆಸುತ್ತಿದ್ದ ನ್ಯಾಯಾಲಯ ಪ್ರಕರಣದ ತನಿಖೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ದಿನಾಂಕ 09.04.2012ರಂದೇ ನ್ಯಾಯಾಲಯಕ್ಕೆ ಮುಟ್ಟಿಸಲಾಗಿದೆಯೆಂದು ಹಾಗೂ ಸದರಿ ಪ್ರಕರಣವು ತಾವು ಠಾಣೆಗೆ ಬರುವ ಮೊದಲೇ "ಸಿ" ಪ್ರಕರಣವೆಂದು ನ್ಯಾಯಾಲಯದಲ್ಲಿ ದಾಖಲಾಗಿರುವುದರಿಂದ ಹಾಗೂ ಪ್ರಕರಣದ ವಿವರಗಳು/ದಾಖಲೆಗಳು ಇಲ್ಲದ ಹಿನ್ನಲೆಯಲ್ಲಿ ದಿನಾಂಕ 02.04.2012ರಂದು ಆರೋಪಿತರನ್ನು ಜಾಮೀನಿನ ಮೇಲೆ ನ್ಯಾಯಾಲಯವು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಅರ್ಜಿದಾರರು ಠಾಣೆಯ ಮೊಕದ್ದಮೆ ಬಗ್ಗೆ ನಿವೇದಿಸಿಕೊಳ್ಳಲು ಅವಕಾಶವಾಗಿಲ್ಲವೆಂಬ ಅಂಶವನ್ನು ಪರಿಗಣಿಸಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಅ 2013 ಬೆಂಗಳೂರು, ದಿನಾಂಕ: 30.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಭಾಗಶಃ ಮಾರ್ಪಡಿಸಿ, ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)(a)(i)ರನ್ವಯ ವಾಗ್ದಂಡನೆ (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

PR.443

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಡಿ.ಬಿ. ಪಾಟೀಲ್, ಪಿಎಸ್‌ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಹಾವೇರಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಪಿಆರ್–109/2012 (ಓ.ಬಿ.ಸಂಖ್ಯೆ: 29/2013) ದಿನಾಂಕ 02.02.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲೂ/15/ಉವ/2013 ದಿನಾಂಕ 12.08.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 01.02.2014
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)90/2013–14 ದಿನಾಂಕ 17.03.2014

**ಪ್ರಸ್ತಾವನೆ:**

ಶ್ರೀ ಡಿ.ಬಿ. ಪಾಟೀಲ್, ಪಿಎಸ್‌ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹಾವೇರಿ (ಶ) ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

ಶ್ರೀ ಡಿ.ಬಿ. ಪಾಟೀಲ, ಪಿಎಸ್‌ಐ, ಕಾ.ಸು., ಹಾವೇರಿ ಶಹರ ಪಿಎಸ್, ನೀವು ಜವಾಬ್ದಾರಿಯುತ ಕಾ.ಸು. ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಿರಿ. ದಿನಾಂಕ 27.10.2012ರಂದು ನಡೆದ ಬಕ್ರೀದ್ ಹಬ್ಬದ ಬಂದೋಬಸ್ತ್ ಕರ್ತವ್ಯಕ್ಕೆ ಎಲ್ಲ ಅಧಿಕಾರಿ ಸಿಬ್ಬಂದಿಗಳನ್ನು ನೇಮಿಸಿದ್ದು, ಹಿಂದಿನ ದಿನ ರಾತ್ರಿ ಗಸ್ತು ಕರ್ತವ್ಯ, ಮೇಲ್ವಿಚಾರಣೆ ಮಾಡಿದ ಅಧಿಕಾರಿಗಳೂ ಸಹ ಬೆಳಿಗ್ಗೆ 09:00 ಗಂಟೆಗೆ ಬಂದು ಬಂದೋಬಸ್ತ್ ಕರ್ತವ್ಯವನ್ನು ನಿರ್ವಹಿಸುವಂತೆ ನಿಸ್ತಂತು ಮೂಲಕ ಆದೇಶಿಸಲಾಗಿತ್ತು. ಆದಾಗ್ಯೂ ನೀವು ಠಾಣೆಯ ಜವಾಬ್ದಾರಿಯುತ ಕಾ.ಸು. ವಿಭಾಗದ ಅಧಿಕಾರಿಯಾಗಿ ಬಂದೋಬಸ್ತ್ ಕರ್ತವ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸುವ ಮನೋಭಾವನೆ ತಾಳದೇ, ಸ್ವತಃ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಮೇಲಾಧಿಕಾರಿಗಳ ಆದೇಶ ಪಾಲನೆ ಮಾಡದೇ ಉಲ್ಲಂಘಿಸಿ ನಿಮ್ಮ ಆದ್ಯ ಕರ್ತವ್ಯದಲ್ಲಿ ತೀವ್ರ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಉದಾಸೀನತೆಯನ್ನು ಪ್ರದರ್ಶಿಸಿರುವುದು ಉಲ್ಲೇಖಿತ ವರದಿಯಿಂದ ಕಂಡು ಬಂದಿರುತ್ತದೆ.

ಶಿಸ್ತು ಪಾಲನಾ ಇಲಾಖೆಯಲ್ಲಿ ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ. ಆದ್ದರಿಂದ ನಿಮ್ಮ ಮೇಲೆ ಈ ದೋಷಾರೋಪಣೆ.

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಹಾವೇರಿ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02.02.2013ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ 06 (ಆರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 12.08.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆಗಳು ಇರದ ಕಾರಣ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಅ 2014 ಬೆಂಗಳೂರು, ದಿನಾಂಕ: 30.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಬಿ. ಪಾಟೀಲ್, ಪಿಎಸ್‌ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು)

**PR.445**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59